# ಜನಪದ ಚಿತ್ರಕಲೆ

ಡಾ|| ಎಸ್. ಸಿ. ಪಾಟೀಲ



ಕರ್ನಾಟಕ ಲಲಿತಕಲಾ ಅಕಾಡೆಮಿ
ನೃಪತುಂಗ ರಸ್ತೆ, ಬೆಂಗಳೂರು-560 002

**JANAPADA CHITRAKALE**
*by Dr. S. C. Patila*
*Published by K. Mukundan, Registrar*
*Karnataka Lalithakala Academy*
*Nrupatunga Road, Bangalore-560 002*

First Impression : 1995

**ಬೆಲೆ : ರೂ. 5-00**

ಮುಖಚಿತ್ರ : **ತೊಗಲುಗೊಂಬೆ**

ಸಂಪಾದಕರು : **ಚಿ. ಸು. ಕೃಷ್ಣಸೆಟ್ಟಿ**

ಮುದ್ರಣ
**ಲಕ್ಷ್ಮಿ ಮುದ್ರಣಾಲಯ**
ಚಾಮರಾಜಪೇಟೆ, ಬೆಂಗಳೂರು-18
ದೂರವಾಣಿ: 6618752, 6613123

# ಒಂದು ಮಾತು

ಕರ್ನಾಟಕ ಲಲಿತಕಲಾ ಅಕಾಡೆಮಿಯು ಇದುವರೆಗೆ ಕಲೆ ಮತ್ತು ಕಲಾವಿದರಿಗೆ ಸಂಬಂಧಿಸಿದಂತೆ ಅನೇಕ ಪುಸ್ತಕಗಳನ್ನು ಪ್ರಕಟಿಸುತ್ತಾ ಬಂದಿದೆ. ಪ್ರಸ್ತುತ ಅಕಾಡೆಮಿಯು ಜನಪ್ರಿಯ ಕಲಾ ಮಾಲಿಕೆಯಡಿಯಲ್ಲಿ ಸುಲಭ ದರದಲ್ಲಿ ಜನಸಾಮಾನ್ಯರಿಗೂ ಕಲೆಯು ಅರ್ಥವಾಗಲಿ ಎಂಬ ಉದ್ದೇಶದಿಂದ ದೃಶ್ಯಕಲೆ, ಕಲೆಯ ರಸಸ್ವಾದನೆ, ಕಲಾ ಪಂಥಗಳು ಈ ವಿಷಯವಾಗಿ ಕಿರು ಪುಸ್ತಕಗಳನ್ನು ಹೊರತರುತ್ತಿದೆ.

ಈ ಮಾಲಿಕೆಯ ಪುಸ್ತಕಗಳನ್ನು ಓದುವುದರಿಂದ ಜನಸಾಮಾನ್ಯರಲ್ಲಿ ಕಲಾ ಇತಿಹಾಸವನ್ನು ಪರಿಚಯಿಸುತ್ತಾ ಕಲಾಕೃತಿಯನ್ನು ನೋಡಿ, ಗ್ರಹಿಸಿ, ರಸಸ್ವಾದನೆ ಮಾಡಿ ಗುಣ ಮೌಲ್ಯಗಳ ಬಗ್ಗೆ ಹೆಚ್ಚಿನ ಆಸಕ್ತಿಯನ್ನು ಹೊಂದಿ ಉತ್ತಮ ಗುಣ ಮೌಲ್ಯವುಳ್ಳ ಕಲಾಕೃತಿಯನ್ನು ಸಂಗ್ರಹಿಸುವಲ್ಲಿ ಆಸಕ್ತಿ ಮೂಡುತ್ತದೆಯೆಂಬ ಆಶಯ ನಮ್ಮದಾಗಿದೆ.

ಈ ಮಾಲಿಕೆಯಲ್ಲಿ ಪುಸ್ತಕಗಳನ್ನು ಚಿತ್ರಯಾತ್ರೆಯ ಸಂದರ್ಭದಲ್ಲಿ ಹೊರತರುತ್ತಿರುವುದು ಔಚಿತ್ಯಪೂರ್ಣವಾಗಿದೆ. ಚಿತ್ರಯಾತ್ರೆಯು ನಾಡಿನಾದ್ಯಂತ ಸಂಚರಿಸುವಾಗ ಎಲ್ಲಾ ಪುಸ್ತಕಗಳು ನಾಡಿನ ಮೂಲೆ ಮೂಲೆಗೂ ತಲುಪಬೇಕೆಂಬುದು ನಮ್ಮ ಉದ್ದೇಶವಾಗಿದೆ. ಈ ಮಾಲಿಕೆಯಲ್ಲಿ ಬರೆದಿರುವ ಲೇಖಕರೆಲ್ಲರೂ ಸಂಬಂಧಪಟ್ಟ ವಿಷಯದಲ್ಲಿ ಪರಿಣತರೇ ಆಗಿದ್ದಾರೆ. ನಮಗೆ ಅತ್ಯಂತ ಕಡಿಮೆ ಅವಧಿಯಲ್ಲಿ ಈ ಕಿರುಹೊತ್ತಿಗೆಗಳನ್ನು ಬರೆದುಕೊಟ್ಟ ಕಲಾ ಲೇಖಕರಿಗೆ ಆಭಾರಿಯಾಗಿದ್ದೇವೆ. ನಮ್ಮ ಈ ಪ್ರಯತ್ನವನ್ನು ಕಲಾವಿದರೂ, ಕಲಾಸಕ್ತರೂ ತುಂಬು ಹೃದಯದಿಂದ ಸ್ವಾಗತಿಸಿ ಪ್ರೋತ್ಸಾಹಿಸುತ್ತಾರೆಂದು ನಂಬಿದ್ದೇವೆ.

**ಸಿ. ಚಂದ್ರಶೇಖರ**
ಅಧ್ಯಕ್ಷರು

# ಜನಪದ ಚಿತ್ರಕಲೆ

ಜಾನಪದ ಎಂಬುದು ಇಂದು ನಾವು ಬಳಸುತ್ತಿರುವ ಅರ್ಥದಲ್ಲಿ ತನ್ನಿಂದ ತಾನೇ ಮೂಡಿ ಬಂದುದಲ್ಲ. ಆದಿವಾಸಿ ಮನುಷ್ಯ ಒಂದು ಕಡೆ ನೆಲೆನಿಂತು ಸಾಂಘಿಕ ಜೀವನವನ್ನು ಆರಂಭಿಸಿದ ನಂತರ ಅವರೆಲ್ಲರ ನಡವಳಿಕೆಗಳಲ್ಲಿನ ಸಮಾನ ಅಂಶಗಳು ನಿಧಾನಕ್ಕೆ ರೂಪುಗೊಳ್ಳುತ್ತ ವಿಧಿವಿಧಾನಗಳಾದವು. ಈ ವಿಧಿವಿಧಾನಗಳು ಬರಬರುತ್ತ ಅವರ ಜೀವನದ ಪ್ರತಿಯೊಂದು ಹಂತದಲ್ಲಿಯೂ ಪ್ರಭಾವ ಬೀರುತ್ತ ತಮ್ಮ ಹಿಡಿತವನ್ನು ಬಿಗಿಗೊಳಿಸುತ್ತ ಬಂದು ನಿಧಾನವಾಗಿ ಸಂಸ್ಕೃತಿಯಾಗಿ ಮಾರ್ಪಟ್ಟವು. ಈ ಸಂಸ್ಕೃತಿ ಎಂಬುದು ಕಣ್ಣಿಗೆ ಕಾಣದ ಕೇವಲ ಆಚರಣೆಗಳಲ್ಲಿ ಮಾತ್ರ ಮನಸ್ಸಿಗೆ ಗೋಚರವಾಗುವ ಕಲ್ಪನೆಯಾಯಿತು. ಇಂಥ ಸಂಸ್ಕೃತಿಗಳು ಎಲ್ಲೆಲ್ಲಿ ಮಾನವ ಜನಾಂಗಗಳು ಒಟ್ಟೊಟ್ಟಿಗೆ ವಾಸ ಮಾಡಲು ಆರಂಭಿಸಿದವೋ ಅಲ್ಲೆಲ್ಲ ಬೇರೆ ಬೇರೆಯಾಗಿ, ಪ್ರಾದೇಶಿಕ ಭಿನ್ನತೆ ಪಡೆದುಕೊಳ್ಳಲಾರಂಭಿಸಿದವು. ಕಾಲ ಕಳೆದಂತೆ, ಬುದ್ಧಿ ಚುರುಕಾಗುತ್ತ ಬಂದಂತೆ ನೆಲದ ಮೋಹ ಬೆಳೆಯುತ್ತ ಬಂದಂತೆ ಸಂಸ್ಕೃತಿ ನಾಗರಿಕತೆಯಾಗಿ ವಿಕಾಸಗೊಳ್ಳತೊಡಗಿತು.[1] ಹೀಗೆ ನಾಗರಿಕತೆ ಬೆಳೆದಂತೆ ಕಲೆಗಳು ವೈವಿಧ್ಯಮಯವಾಗಿ ಬೆಳೆಯುತ್ತ ಬಂದಿವೆ.

ಜಾನಪದ ಅಧ್ಯಯನದಿಂದ ನಮ್ಮ ದೇಶೀ ಸಂಸ್ಕೃತಿಯ ಅಜ್ಞಾತಲೋಕವೊಂದರ ಪರಿಚಯವಾಗುತ್ತದೆ. ಇದರಿಂದ ಜನಪದ ಸಂಸ್ಕೃತಿ, ಸಮಾಜ ಮತ್ತು ಕಲೆಗಳಿಗಿರುವ ಸಂಬಂಧವನ್ನು ತಿಳಿದುಕೊಳ್ಳಲು ಸಾಧ್ಯವಾಗುತ್ತದೆ. ಇಲ್ಲಿ ಜನಪದ ಲಲಿತಕಲೆಗಳಲ್ಲಿ ಪ್ರಮುಖವಾದ ಚಿತ್ರಕಲೆಯನ್ನು ಸ್ಥೂಲವಾಗಿ ಕರ್ನಾಟಕದ ಹಿನ್ನೆಲೆಯಲ್ಲಿ ವಿವೇಚಿಸಲಾಗಿದೆ.

## ಜನಪದ ಮತ್ತು ಶಿಷ್ಟಪದ ಚಿತ್ರಕಲೆಯ ವೈಲಕ್ಷಣಗಳು

ವಸ್ತುವೊಂದು ಸಿದ್ಧರೂಪಗೊಳ್ಳುವಾಗ ಕಚ್ಚಾ ಸಾಮಗ್ರಿಯಾಗಿ ಇರುವಂತೆ ಇಂದಿನ ಶಿಷ್ಟರೂಪಕ್ಕೆ ಮೊದಲು ಕಚ್ಚಾರೂಪವೊಂದು ಇದ್ದು ಕಾಲಕ್ರಮೇಣ ಅದು ಶಿಷ್ಟದ ಶಿಸ್ತಿಗೆ ಒಳಪಟ್ಟಿರುವುದು ತಿಳಿದುಬರುತ್ತದೆ. ಈ ಕಚ್ಚಾರೂಪವೆನ್ನುವುದು ಜನಪದರಲ್ಲಿ ಹೊಳೆಯತೊಡಗಿದ್ದುದು, ಬದುಕಿನ ವಿವಿಧ ಚಟುವಟಿಕೆಗಳ ಅಂಗವಾಗಿಯೇ ಎಂಬುದು ಗಮನಿಸಬೇಕಾದ ಅಂಶ. ಈ ಅರ್ಥದಲ್ಲಿ ಬದುಕಿನ ಎಲ್ಲ ರಂಗಗಳ ವಿವಿಧಾಂಗಗಳೇ ಜನಪದ ಚಿತ್ರಕಲೆಯ ಮುಖ್ಯ ಲಕ್ಷಣಗಳು. ಸಂಪ್ರದಾಯ, ನಂಬಿಕೆ, ಧರ್ಮದ

1. ಬಸವರಾಜ ನೆಲ್ಲಿಸರ (ಸಂ.): ಜಾನಪದ ಮತ್ತು ಪೂರಕ ಕ್ಷೇತ್ರಗಳು, ಪುಟ-1.

ಆಚರಣೆಯ ಹಿನ್ನೆಲೆಯಲ್ಲಿ ಜನಪದರಲ್ಲಿ ಮೂರ್ತರೂಪಕ್ಕೆ ತಿರುಗಿದುದೇ ಜನಪದ ಚಿತ್ರಕಲೆ.

ಶಾಸ್ತ್ರೋಕ್ತ ಕಲಿಕೆಗೆ ಒಳಪಟ್ಟ ಶಿಷ್ಟಪದ ಚಿತ್ರಕಲೆಯ ಸ್ವರೂಪವೇ ಬೇರೆ. ಬದುಕೇ ಆಗಿರುವ ಸಹಜ ಜನಪದ ಚಿತ್ರಕಲೆಯೇ ಬೇರೆ. ಕಲೆಗಾಗಿ ಕಲೆ, ಆನಂದಕ್ಕಾಗಿ ಕಲೆ, ಪ್ರವೃತ್ತಿಗಾಗಿ ಕಲೆ ಎಂದು ಶಿಷ್ಟಪದ ಚಿತ್ರಕಲೆಯನ್ನು ಪರಿಭಾವಿಸಿದರೆ, ಬದುಕಿಗಾಗಿ ಪಟ್ಟ ಪಾಡೇ ಜನಪದ ಚಿತ್ರಕಲೆ. ಈಗ ವಿಂಗಡಿಸಿಕೊಂಡಿರುವ ಲಲಿತಕಲೆ ಮತ್ತು ಕುಶಲಕಲೆಗಳ ಮೂಲ ನೆಲೆ ಜನಪದವೇ, ಮಳಲ ಮೇಲಿನ ಹೆಜ್ಜೆಯುಂತೆ ತೋರುವ ಇವುಗಳ ಮೂಲರೂಪ ಜನಪದದಲ್ಲಿದೆ. ಪ್ರಕೃತಿ ಮತ್ತು ಬದುಕು ಜನಪದ ಚಿತ್ರಕಲೆಗೆ ಆಶ್ರಯ ನೀಡಿದರೆ, ಜನಪದ ಕಲೆಯಿಂದ ಶಿಷ್ಟಪದ ಕಲೆ ಬೌದ್ಧಿಕ ವಿಕಾಸ ಪಡೆದು ಬೆಳೆಯಿತೆನ್ನಬಹುದು. ಈ ಅರ್ಥದಲ್ಲಿ ಜನಪದ ಚಿತ್ರಕಲೆಯ ಲಕ್ಷಣವೆಂದರೆ ಬದುಕಿನ ಲಕ್ಷಣ. ವಿಶಾಲ ಅರ್ಥದಲ್ಲಿ ಅದು ಪ್ರಕೃತಿಯ ಲಕ್ಷಣವೆಂದೇ ಅರ್ಥ.

ಶಿಷ್ಟಪದ ಚಿತ್ರಕಲೆ ಬಿಡುವಿನ ವೇಳೆಯಲ್ಲಿ ಹುಟ್ಟಿದರೆ, ಜನಪದ ಚಿತ್ರಕಲೆ ದುಡಿಯುವ ಸಮಯದಲ್ಲಿ ಸೃಷ್ಟಿಯಾಗಿದೆ. ಹೀಗೆ ಅದು ನಿಸರ್ಗದ ಸಿದ್ಧರೂಪ. ಚಿತ್ರಕಲೆಯ ವರ್ಣಗಾರಿಕೆ, ಆಕಾರಗಳನ್ನು ಅಧ್ಯಯನ ಮಾಡಿ ಅದಕ್ಕೆ ಬೇಕಾದ ಚೌಕಟ್ಟನ್ನು ನಿರ್ಮಿಸಿಕೊಂಡು ಸ್ವತಂತ್ರವಾಗಿ ಸೃಷ್ಟಿಸಿದ ಕಲಾವಿದನ ಕಲೆ ಶಿಷ್ಟಪದ ಚಿತ್ರಕಲೆಯೆನಿಸಿದರೆ, ಅಧ್ಯಯನದ ಯಾವ ಅರಿವೂ ಇಲ್ಲದೆ ತಾವು ಪಡೆದ ಅನುಭವಗಳಿಗೆ ಸಹಜವಾದ ಮೂರ್ತರೂಪ ಪಡೆದು ಹೊರಬರುವ ಕಲೆ ಜನಪದ ಚಿತ್ರಕಲೆ. ಇವುಗಳಲ್ಲಿ ಒಂದು ವ್ಯಷ್ಟಿಯ ಸೃಷ್ಟಿಯೆನಿಸಿದರೆ, ಇನ್ನೊಂದು ಸಮಷ್ಟಿಯ ಸೃಷ್ಟಿಯಾಗಿರುತ್ತದೆ. ಹೀಗಾಗಿ ಶಿಷ್ಟಪದ ಚಿತ್ರಕಲೆ ಗೋಡೆಗಳ ಮೇಲೆ, ಕಟ್ಟಿಗೆಯ ಮೇಲೆ, ಲೋಹಗಳ ಮೇಲೆ, ವಿಗ್ರಹ ಮುಂತಾದ ಮಾಧ್ಯಮಗಳ ಮೇಲೆ ಶಾಶ್ವತವಾಗಿ ಉಳಿದುಬಂದರೆ, ಜನಪದ ಚಿತ್ರಕಲೆ ಅನುಭವಕ್ಕೆ ಸೀಮಿತವಾಗಿ ಅಶಾಶ್ವತವಾಗಿ ಬೆಳೆದುಬಂದಿದೆ. ಶಿಷ್ಟಪದ ಚಿತ್ರಕಲೆಯ ಹಿಂದೆ ಒಬ್ಬ ರಾಜನೋ, ಧರ್ಮವೋ ಇದ್ದರೆ, ಜನಪದ ಚಿತ್ರಕಲೆಯಲ್ಲಿ ದಟ್ಟವಾದ ಬದುಕು ಇರುವುದನ್ನು ಕಾಣುತ್ತೇವೆ. ಶಿಷ್ಟಪದ ಚಿತ್ರಕಲೆಯಲ್ಲಿ ಕಲಿಕೆಯ ಅನಿವಾರ್ಯತೆಯಿಂದಾಗಿ ಬೆರಳೆಣಿಕೆಯಷ್ಟು ಮಹಿಳೆಯರಿದ್ದರೆ, ಜನಪದ ಚಿತ್ರಕಲೆಯಲ್ಲಿ ಮಹಿಳೆಯರದೇ ಸಿಂಹಪಾಲು. ಜನಪದ ಚಿತ್ರಕಲೆ ಸಂಪ್ರದಾಯನಿಷ್ಠವಾಗಿ ಸರಳರೂಪದಲ್ಲಿದ್ದರೆ ಶಿಷ್ಟಪದ ಚಿತ್ರಕಲೆ ಸಂಕೀರ್ಣನಿಷ್ಠವಾಗಿ ಕ್ಲಿಷ್ಟತೆಯನ್ನು ಹೊಂದಿರುತ್ತದೆ. ಜನಪದ ಚಿತ್ರಕಲೆಯಲ್ಲಿ ರೇಖೆಗಳದೇ ಒಂದು ವಿಶೇಷ ಸೊಗಸು, ಅಲಂಕಾರವೇ ಪ್ರಮುಖ ವೈಶಿಷ್ಟ ಶಿಷ್ಟಪದ ಚಿತ್ರಕಲೆಯಲ್ಲಿ ಪ್ರಮಾಣಬದ್ಧ ರೇಖೆಗಳಿಗೆ ಹೆಚ್ಚಿನ ಮಹತ್ವವಿರುತ್ತದೆ. ಜನಪದರ ತೆರೆದ ಬದುಕಿನಂತೆ ಅವರ ಚಿತ್ರಕಲೆಯೂ ಕೂಡ. ಜನಪದರ ದೈನಂದಿನ ಬದುಕಿನ ವಿವರಗಳು ಚಿತ್ರರಚನೆಯ ಮೂಲ ವಿಷಯಗಳಾಗಿದ್ದರೆ ಶಿಷ್ಟಪದ ಚಿತ್ರಕಲೆಯಲ್ಲಿ ಪ್ರಧಾನವಾಗಿ ಬದುಕಿನ ಆಯ್ದಮುಖಗಳ ಅಭಿವ್ಯಕ್ತಿ ಇರುತ್ತದೆ.

ಜನಪದ ಚಿತ್ರಕಲೆಯಲ್ಲಿ ವರ್ಣಗಾರಿಕೆಯು, ಅತ್ಯಂತ ಮಹತ್ವವಾದುದಾಗಿದೆ.

ಶ್ರೀಮಂತವಾದ ಆಕರ್ಷಕವಾದ ವರ್ಣಗಳು ಜನಪದರಿಗೆ ಹೆಚ್ಚು ಪ್ರಿಯವಾಗಿರುತ್ತವೆ. ಆದರೆ ಶಿಷ್ಟಪದ ಚಿತ್ರಕಲೆಯಲ್ಲಿ ವರ್ಣಗಳು ಹಿತಮಿತವಾಗಿ ಔಚಿತ್ಯಪೂರ್ಣವಾಗಿ ಬಳಕೆಯಾಗುವುದನ್ನು ಕಾಣುತ್ತೇವೆ. ಜನಪದರು ತಮ್ಮ ಸುತ್ತಮುತ್ತಲಿರುವ ನೈಸರ್ಗಿಕ ವಸ್ತುಗಳಾದ ಕಲ್ಲು, ಮಣ್ಣು, ಹೂ, ಎಲೆ ಮುಂತಾದ ವಸ್ತುಗಳಿಂದ ಬಣ್ಣವನ್ನು ತಯಾರಿಸಿಕೊಳ್ಳುತ್ತಾರೆ.

ಹೀಗೆ ಜನಪದ ಚಿತ್ರಕಲೆಯು ವಸ್ತು, ರೇಖಾವಿನ್ಯಾಸ, ಬಣ್ಣಗಾರಿಕೆ, ಬಳಕೆಯ ಸಾಮಗ್ರಿ ಮೊದಲಾದವುಗಳಲ್ಲಿ ಶುದ್ಧ ಜನಪದೀಯ ಅಂಶಗಳನ್ನು ಪಡೆದುಕೊಂಡಿರುತ್ತದೆ. ಆದರೆ ಶಿಷ್ಟಪದ ಚಿತ್ರಕಲೆ ಇವುಗಳಿಂದ ಭಿನ್ನವಾಗಿರುತ್ತದೆ. ಹೀಗಿದ್ದರೂ ಕೆಲವು ಸಲ ಈ ಎರಡೂ ಕಲೆಗಳು ಒಂದಕ್ಕೊಂದು ಪೂರಕ ಹಾಗೂ ಪ್ರೇರಕವಾಗಿ ಕಂಡುಬರುವುದುಂಟು.

## ಜನಪದ ಚಿತ್ರಕಲೆಯ ವರ್ಗೀಕರಣ

ಕರ್ನಾಟಕದ ಜನಪದ ಚಿತ್ರಕಲೆಯು ಅತ್ಯಂತ ಆಕರ್ಷಕ ಮತ್ತು ಶ್ರೀಮಂತ ವಾಗಿರುವುದಲ್ಲದೆ, ವಿಸ್ತಾರವಾದ ನೆಲೆಗಟ್ಟಿನ ಮೇಲೆ ನಿಂತಿರುವಂತಹದಾಗಿದೆ. ಇದರ ವ್ಯವಸ್ಥಿತ ಅಧ್ಯಯನಕ್ಕಾಗಿ ಅದರ ವರ್ಗೀಕರಣ ತುಂಬಾ ಅವಶ್ಯಕವಾಗಿದೆ. ಜನಪದ ಸಾಹಿತ್ಯ ಕಲೆಗಳ ವರ್ಗೀಕರಣ ಮಾಡಿದ ವಿದ್ವಾಂಸರು ಜನಪದ ಚಿತ್ರಕಲೆಯ ವರ್ಗೀಕರಣದ ಕಡೆಗೆ ಹೆಚ್ಚಿನ ಗಮನಹರಿಸಿಲ್ಲ. ಆದರೆ ಜನಪದ ಕಲೆಗಳ ವರ್ಗೀಕರಣದಲ್ಲಿ ಜನಪದ ಚಿತ್ರಕಲೆಯನ್ನು ಗುರುತಿಸುವ ಪ್ರಯತ್ನಗಳು ಈಚೆಗೆ ನಡೆದಿವೆ.

ಜಾನಪದ ಕಲಾತ್ಮಕ ಕ್ಷೇತ್ರದ ಒಂದು ಅಂಗ ಜನಪದ ಕಲಾವಿಭಾಗ, ಶಾಖೋಪ ಶಾಖೆಗಳಲ್ಲಿ ಮೈಚಾಚಿದ ಈ ಕ್ಷೇತ್ರದ ಹರವು ವಿಸ್ತಾರವಾದುದು. ಅಧ್ಯಯನಕಾರರಿಗೆ ಇದೊಂದು ಕನ್ನೆನೆಲ. ಈ ಜನಪದ ಕಲಾವಿಭಾಗದ ಕ್ರಿಯಾತ್ಮಕ ಗುಂಪಿಗೆ ಸೇರುವ ಕಲೆಗಳಲ್ಲಿ ಜನಪದ ಚಿತ್ರಕಲೆಯೂ ಒಂದು.

ಈ ಜನಪದ ಚಿತ್ರಕಲೆಯ ಅಧ್ಯಯನವನ್ನು ಶಾಸ್ತ್ರೀಯಗೊಳಿಸುವ ನಿಟ್ಟಿನಲ್ಲಿ ಸಾಮಗ್ರಿ ಸಂಗ್ರಹ ಮತ್ತು ಸಂಗ್ರಹಿಸಿದ ಸಾಮಗ್ರಿಯನ್ನು ವಿಂಗಡಿಸಿಕೊಳ್ಳುವುದರಲ್ಲಿಯೇ ವರ್ಗೀಕರಣದ ಸಮಸ್ಯೆ ಎದುರಾಗುವುದು. ಹೀಗೆ ಮಾಡುವ ವರ್ಗೀಕರಣದಲ್ಲಿ ಒಂದೊಂದು ಶಿಸ್ತಿಗೂ ತನ್ನದೇ ಆದ ಹಿತಾಸಕ್ತಿಗಳಿವೆ. ಈ ಹಿನ್ನೆಲೆಯಲ್ಲಿ ಕರ್ನಾಟಕದ ಜನಪದ ಚಿತ್ರಕಲೆಯನ್ನು ಮೂರು ರೀತಿಯಲ್ಲಿ ಹೀಗೆ ವಿಂಗಡಿಸಬಹುದಾಗಿದೆ.

1. ಸೌಂದರ್ಯಮೂಲ ಜನಪದ ಚಿತ್ರಕಲೆ
2. ಧರ್ಮಮೂಲ ಜನಪದ ಚಿತ್ರಕಲೆ
3. ವೃತ್ತಿಮೂಲ ಜನಪದ ಚಿತ್ರಕಲೆ

ಇವುಗಳಲ್ಲಿ ಸಮಾವೇಶಗೊಳ್ಳುವ ಜನಪದ ಚಿತ್ರಕಲೆಯನ್ನು ಇಲ್ಲಿ ಸ್ಥೂಲವಾಗಿ ಚರ್ಚಿಸಬಹುದಾಗಿದೆ.

**1. ಸೌಂದರ್ಯಮೂಲ ಜನಪದ ಚಿತ್ರಕಲೆ:** ಜನಪದರ ಸೌಂದರ್ಯಮೂಲ ಅಭಿವ್ಯಕ್ತಿಯ ಸಾಧನವಾಗಿ ರಚನೆಗೊಂಡ ಚಿತ್ರಕಲೆಯನ್ನು ಸೌಂದರ್ಯಮೂಲ ಜನಪದ ಚಿತ್ರಕಲೆ ಎಂದು ಕರೆಯುಬಹುದು. ಇದರಲ್ಲಿ ಪ್ರಯೋಜನಮೂಲ ಮತ್ತು ಮನರಂಜನಾಮೂಲ ಜನಪದ ಚಿತ್ರಕಲೆಯೆಂದು ವಿಂಗಡಿಸಬಹುದು.

**ಪ್ರಯೋಜನಮೂಲ ಜನಪದ ಚಿತ್ರಕಲೆ:** ತಮ್ಮ ನಿತ್ಯದ ಚಟುವಟಿಕೆಗಳನ್ನು ಕಲಾತ್ಮಕವಾಗಿ ಕಂಡ ಜನಪದರು, ಹಾಸು, ಹೊದಿಕೆ, ಮನೆ, ಗೋಡೆ ತಮ್ಮ ಅಂಗಾಂಗಗಳಲ್ಲಿ ಸೌಂದರ್ಯವನ್ನು ಕಾಣಲಿಕ್ಕಾಗಿ ತಮಗೆ ಅಂದು ಕಂಡಂತೆ ಚಿತ್ರಾಲಂಕಾರಗಳನ್ನು ಸೃಜಿಸಿಕೊಂಡರು. ತಮ್ಮ ಅವಶ್ಯಕತೆಗಳು ಪ್ರಯೋಜನಕಾರಿಯಾಗುವುದರೊಂದಿಗೆ ಕಣ್ಣಿನ ನೋಟಕ್ಕೆ ಶೃಂಗಾರಮಯವಾಗಿಯೂ ಕಾಣುವಂತೆ ಮಾಡಿಕೊಂಡಿರುವುದು ಕಂಡುಬರುತ್ತದೆ. ಈ ಪ್ರಯೋಜನ ಮೂಲ ಜನಪದ ಚಿತ್ರಕಲೆಯನ್ನು 1) ಗೃಹಾಲಂಕರಣದ ನೆಲಗೋಡೆಯ ಮೇಲಿನ ಚಿತ್ರವಿನ್ಯಾಸ, 2)ಚರ್ಮದ ಮೇಲಿನ ಚಿತ್ರವಿನ್ಯಾಸ, 3)ತಾಳೆಗರಿ, ಕಾಗದ ಕಡತ, ರಟ್ಟಿನ ಮೇಲಿನ ಚಿತ್ರವಿನ್ಯಾಸ, 4)ದಾರದ ಸಾಧನದ ಚಿತ್ರ ವಿನ್ಯಾಸ, 5)ಇತರ ಸಾಧನದ ಚಿತ್ರ ವಿನ್ಯಾಸಗಳೆಂದು ವಿಂಗಡಿಸಬಹುದು.

**2. ಗೃಹಾಲಂಕರಣದ ನೆಲಗೋಡೆಯ ಮೇಲಿನ ಚಿತ್ರ ವಿನ್ಯಾಸಗಳು:** ನೆಲಗೋಡೆಯ ಮೇಲೆ ರಚಿತವಾಗುವ ಚಿತ್ರವಿನ್ಯಾಸಗಳು ಸೌಂದರ್ಯದ ಹಾಗೂ ಹೆಚ್ಚಾಗಿ ಹಬ್ಬ-ಹುಣ್ಣಿಮೆಗಳಲ್ಲಿ ಧಾರ್ಮಿಕ ಹಿನ್ನೆಲೆಯಲ್ಲಿ ರಚನೆಗೊಳ್ಳುವಂತವುಗಳಾಗಿದ್ದು ಧರ್ಮಮೂಲ ಜನಪದ ಚಿತ್ರಕಲೆಯಲ್ಲಿ ಇವುಗಳ ವಿವರವನ್ನು ಕಾಣಬಹುದು.

**ಚರ್ಮದ ಮೇಲಿನ ಚಿತ್ರವಿನ್ಯಾಸಗಳು:** ಇಲ್ಲಿ ಎರಡು ರೀತಿಯ ಜನಪದ ಚಿತ್ರಕಲೆ ಇರುವುದನ್ನು ಕಾಣುತ್ತೇವೆ. ಒಂದು ಶಾಶ್ವತ ಚಿತ್ರಕಲೆ. ಇನ್ನೊಂದು ಅಶಾಶ್ವತ ಚಿತ್ರಕಲೆ, ಶಾಶ್ವತ ಚಿತ್ರಕಲೆಯಲ್ಲಿ ಬರುವ ಹಚ್ಚೆಯ ಕಲೆಯನ್ನು ಇಲ್ಲಿ ನೋಡಬಹುದು.

**ಹಚ್ಚೆ:** ಜನಪದ ಚಿತ್ರಕಲಾ ಪರಂಪರೆಯಲ್ಲಿ ಹಚ್ಚೆ, ಶರೀರದ ಮೇಲೆ, ಶಾಶ್ವತ ಚಿತ್ರಕಲೆಯಾಗಿ ಪ್ರಪಂಚವ್ಯಾಪಿ ದೀರ್ಘ ಇತಿಹಾಸ ಹೊಂದಿದೆ. ಇದೊಂದು ಜನಪ್ರಿಯ ಕಲೆ.

ಚರ್ಮದ ಮೇಲೆ ಶಾಶ್ವತವಾಗಿ ಇರಬಲ್ಲ ಹಸಿರುಬಣ್ಣದ ಗುರುತೇ ಹಚ್ಚೆಯಾಗಿದೆ. ಹಚ್ಚೆಯ ಕುರಿತು ಜನಪದರಲ್ಲಿ ಅನೇಕ ಕಥೆಗಳು, ಐತಿಹ್ಯಗಳು, ನಂಬಿಕೆಗಳು, ಒಗಟು, ಹಾಡುಗಳು ಪ್ರಚಲಿತದಲ್ಲಿವೆ. ಹಚ್ಚೆಯನ್ನು ಸ್ತ್ರೀಯರು ಹೆಚ್ಚಾಗಿ ಹಾಕಿಸಿಕೊಳ್ಳುತ್ತಿದ್ದು, ಪುರುಷರು ಕಡಿಮೆ ಪ್ರಮಾಣದಲ್ಲಿ ಹಾಕಿಸಿಕೊಳ್ಳುತ್ತಾರೆ, ಹಚ್ಚೆಯನ್ನು ಶರೀರದ ಎಲ್ಲ ಭಾಗಗಳಲ್ಲಿಯೂ ಹಾಕಿಸಿಕೊಳ್ಳುತ್ತಾರೆ. ಮುಖ, ಕೊರಳು, ಕೈ, ಎದೆ, ಹೊಟ್ಟೆ, ಬೆನ್ನು, ಗುಪ್ತಾಂಗ, ಕಾಲು ಮುಂತಾದ ಕಡೆಗೆ ಸೌಂದರ್ಯದ ಹಿನ್ನೆಲೆಯಲ್ಲಿ, ಧಾರ್ಮಿಕ ಹಿನ್ನೆಲೆ ಹಾಗೂ ವೈದ್ಯಕೀಯ ಚಿಕಿತ್ಸೆಯಾಗಿ ಕೂಡ ಹಾಕಿಸಿಕೊಳ್ಳುವುದುಂಟು. ಒಂದೊಂದು ಸ್ಥಳದಲ್ಲಿ ಹಾಕಿಸಿಕೊಳ್ಳುವ ಹಚ್ಚೆಗೆ ಅದರದೇ ಆದ ಜನಪದ ಸಂಪ್ರದಾಯ, ನಂಬಿಗೆ, ಆಶಯಗಳಿವೆ. ಹಚ್ಚೆಯನ್ನು ಸೂಜಿಯಿಂದ ಚುಚ್ಚಿ ಚುಚ್ಚಿ ಹಾಕುತ್ತಾರೆ. ಈ ಸಂದರ್ಭದಲ್ಲಿ

ಹಾಡು ಹೇಳುವುದುಂಟು. ಹಚ್ಚೆಯ ಚಿತ್ರವಿನ್ಯಾಸಗಳು ವೈವಿಧ್ಯತೆಯಿಂದ ಕೂಡಿದವುಗಳಾಗಿದ್ದು ಧಾರ್ಮಿಕ ದೇವಾನುದೇವತೆಗಳು, ಪುರಾಣ, ರಾಮಾಯಣ, ಮಹಾಭಾರತದ ಚಿತ್ರಗಳು, ನೈಸರ್ಗಿಕ ಚಿತ್ರಗಳು, ಪ್ರಾಣಿ, ಪಕ್ಷಿ, ಹೂ, ಎಲೆಬಳ್ಳಿ ಮುಂತಾದ ಸ್ಥಳೀಯ ಪರಿಸರದ ಚಿತ್ರಗಳು, ಕೃಷಿ ಪ್ರಧಾನವಾದ ವಸ್ತುಗಳು, ವಿವಿಧ ಧಾನ್ಯಗಳ ಚಿತ್ರಗಳು ಮತ್ತು ಹೆಸರುಗಳನ್ನು ಹಾಕಿಸಿಕೊಳ್ಳುತ್ತಿದ್ದು ಚಿತ್ರಗಳಲ್ಲಿ ಸರಳರೇಖಾ ಮತ್ತು ವಕ್ರರೇಖಾ ಚಿತ್ರವಿನ್ಯಾಸಗಳು ಹೇರಳವಾಗಿ ಕಂಡುಬರುತ್ತವೆ. ಕರ್ನಾಟಕದಲ್ಲಿ ಕಿಳ್ಳಿಕೇತ ಕೊರವ ಜನಾಂಗ ಹಚ್ಚೆಯನ್ನು ಹೆಚ್ಚಾಗಿ ಹಾಕುವ ಪ್ರಮುಖ ವೃತ್ತಿಯ ಜನಾಂಗವಾಗಿವೆ.

**ಮದರಂಗಿ:** ಕಣ್ಣಿಗೆ ಇಂಪು, ಒಡಲಿಗೆ ತಂಪು ನೀಡುವ ಮದರಂಗಿ ಸಂಪ್ರದಾಯ, ಕಲಾತ್ಮಕತೆ, ಸೌಭಾಗ್ಯದ ಕುರುಹುಗಳಾಗಿಯೂ ಬಳಕೆಗೊಳ್ಳುತ್ತದೆ. ಪ್ರಾಚೀನ ಕಾಲದಿಂದಲೂ ಬೆಳೆದುಬಂದ ಈ ಕಲೆ ವಿವಿಧ ರೀತಿಯ ಹೆಸರುಗಳಿಂದ ದೇಶ, ಭಾಷೆ, ಪ್ರದೇಶಗಳನ್ನು ಮೀರಿ ಜನಪ್ರಿಯವಾಗಿದೆ.

ಮದರಂಗಿಯನ್ನು ಹಬ್ಬ, ಹುಣ್ಣಿಮೆ, ಉತ್ಸವ, ಮದುವೆ ಮುಂಜಿಯ ಸಂದರ್ಭಗಳಲ್ಲಿ ಹಚ್ಚಿಕೊಳ್ಳುತ್ತಾರೆ. ಇತ್ತೀಚಿನ ದಿನಗಳಲ್ಲಿ ಸೌಂದರ್ಯದ ಸಾಧನವಾಗಿ ಯಾವಾಗಬೇಕಾದರೂ ಹಚ್ಚಿಕೊಳ್ಳಲಾಗುತ್ತಿದೆ. ಮದರಂಗಿಯ ಬಣ್ಣ ತಯಾರಿಕೆ ತುಂಬ ಸರಳ. ಮದರಂಗಿ ಗಿಡದ ತಪ್ಪಲನ್ನು ಚೆನ್ನಾಗಿ ಒಣಗಿಸಿ ಕುಟ್ಟಿ ಪುಡಿಮಾಡಿ ಅಥವಾ ಹಸಿಯಾಗಿಯೂ ಬಳಸಬಹುದು. ಈಗ ಇದರ ಪುಡಿ ಅಂಗಡಿಗಳಲ್ಲಿ ಲಭ್ಯವಾಗುತ್ತದೆ. ನೀಲಗಿರಿ ಎಣ್ಣೆ, ಲಿಂಬೆಹಣ್ಣಿನ ರಸ ಮತ್ತು ಮದರಂಗಿ ಪುಡಿಯನ್ನು ಚೆನ್ನಾಗಿ ಕಲಸಿ ದ್ರಾವಣ ತಯಾರಿಸುವುದೂ ಉಂಟು. ಇಲ್ಲಿ ಪ್ರಾದೇಶಿಕ ವ್ಯತ್ಯಾಸಗಳಿವೆ. ಬೆಂಕಿಕಡ್ಡಿಯ ಹಿಂಭಾಗ, ಇಲ್ಲವೇ ಬೇರೆ ಕಡ್ಡಿಯ ಸಹಾಯದಿಂದ ಚಿತ್ರ ಬರೆಯುವುದುಂಟು. ಈಗ ಆಧುನಿಕ ಸಲಕರಣೆಗಳು ಬಂದಿವೆ.

ಮದರಂಗಿಯ ಚಿತ್ರಗಳು ಮಾನವಾಕೃತಿಯಲ್ಲಿ ಇರದೆ ಹೆಚ್ಚಾಗಿ ವಲ್ಲರಿ ಆಕೃತಿಯುಳ್ಳವುಗಳಾಗಿವೆ. ಇದರಲ್ಲಿ ಬಳ್ಳಿ, ಆಕೃತಿ, ಸುಳುಹುಗಳಿಗೆ ಹೆಚ್ಚಿನ ಪ್ರಾಧಾನ್ಯತೆ; ಸ್ವಸ್ತಿಕ, ಶ್ರೀ, ಓಂ ನಂತಹ ಸಂಕೇತ ಪ್ರಧಾನ ಆಕೃತಿಗಳು, ಶುಭ-ಲಾಭ, ಸೂರ್ಯ-ಚಂದ್ರ ಮುಂತಾದ ವಿವಿಧ ಆಭರಣಗಳ ಮಾದರಿಯ ಚಿತ್ರವಿನ್ಯಾಸಗಳು ಹೆಚ್ಚಾಗಿ ಕಂಡುಬರುತ್ತವೆ.

ಹೀಗೆ ಹತ್ತು ಹಲವಾರು ರೀತಿಯ ಸುಂದರ ವಿನ್ಯಾಸಗಳ ಮದರಂಗಿಯು ಒಣಗಿದ ಮೇಲೆ ಸಾಸಿವೆ ಎಣ್ಣೆ ಇಲ್ಲವೆ ನಿಂಬೆರಸವನ್ನು ನಯವಾಗಿ ಇದರ ಮೇಲೆ ಲೇಪಿಸಲಾಗುತ್ತದೆ. ಒಂದು ಗಂಟೆಯ ನಂತರ ಹಚ್ಚಿದ ಮದರಂಗಿಯನ್ನು ಒರೆಸಿದರೆ ಕಂದುಬಣ್ಣದ ಕೆಂಪಾದ ನಯನ ಮನೋಹರ ಚಿತ್ರವಿನ್ಯಾಸಗಳು ಕಾಣಿಸುತ್ತವೆ. ಅದಕ್ಕೆ ಎಣ್ಣೆಯನ್ನು ಹಚ್ಚಬೇಕು. ಮಾರನೆಯ ದಿನ ಬೆಳಗಿನವರೆಗೆ ಬಿಟ್ಟು ನಂತರ ಕೈಯನ್ನು ತೊಳೆದರೆ ಬಹಳ ಕಾಲ ಕೆಂಪುಬಣ್ಣದ ಮದರಂಗಿ ಮಾಸದೇ ಇರುತ್ತದೆ.

**3. ತಾಳೆಗರಿ, ಕಾಗದ, ಕಡತ, ರಟ್ಟಿನ ಮೇಲಿನ ಚಿತ್ರ ವಿನ್ಯಾಸಗಳು:** ಜನಪದ ಚಿತ್ರಕಲಾ ಸೃಷ್ಟಿ, ತಾಳೆಗರಿ, ಕಾಗದ, ಕಡತ, ರಟ್ಟುಗಳಂತಹ ಮಾಧ್ಯಮಗಳಲ್ಲಿಯೂ

ಬಳಕೆಯಾಗಿದ್ದುದು ಕಂಡುಬರುತ್ತದೆ. ಇವುಗಳಲ್ಲಿ ಮುಖ್ಯವಾಗಿರುವ ನೀಲಿಹೊತ್ತಿಗೆ ಮತ್ತು ಗಿಳಿ ಶಕುನದ ಚಿತ್ರ ವಿನ್ಯಾಸಗಳು ವಿಶೇಷವಾಗಿವೆ.

ನೀಲಿ ಹೊತ್ತಿಗೆಯೆಂದರೆ ಚಿತ್ರಗಳಿಗಿರುವ ಒಂದು ಪುಸ್ತಕ. ಗಿಳಿಶಕುನದ ಚಿತ್ರಗಳೆಂದರೆ ಚಿತ್ರದ ಕಾರ್ಡುಗಳಿದ್ದ ಕಟ್ಟು. ಗಿಳಿಯಿಂದ ಈ ಕಾರ್ಡನ್ನು ತೆಗೆಯಿಸಿ, ಆ ಚಿತ್ರದ ಮೂಲಕ ಭವಿಷ್ಯ ಹೇಳುತ್ತಾರೆ. ನೀಲಿಹೊತ್ತಿಗೆಯಲ್ಲಿ ಕಡ್ಡಿಹಾಕಿ ಅಲ್ಲಿ ಬರುವ ಚಿತ್ರದ ಮೇಲೆ ಭವಿಷ್ಯ ಹೇಳುತ್ತಾರೆ. ಇವೆರಡು ಒಂದೇ ಆಶಯದ ಬೇರೆ ಬೇರೆ ಮಾಧ್ಯಮಗಳು. ಎರಡರಲ್ಲೂ ಶುಭ ಮತ್ತು ಅಶುಭ ಚಿತ್ರಗಳ ರಚನೆಗಳಿದ್ದು ರೇಖಾ ಮತ್ತು ವರ್ಣಚಿತ್ರಗಳು ಒಳಿತು ಕೆಡುಕಿನ ಹಿನ್ನೆಲೆಯಲ್ಲಿ ಚಿತ್ರರಚನೆಯಾಗಿರುವುದು ವೈಶಿಷ್ಟ್ಯ. ಮುತ್ತಿನ ತೆನಿ, ಈಶ್ವರ, ಬಸವಣ್ಣ, ಋಷಿ, ತೊಟ್ಟಿಲು, ಕಸಬರಿಗೆ, ಹೆಣ, ಗೂಗೆ, ಹಲ್ಲಿ, ಬೆಕ್ಕು, ಇಲಿ, ಹುಲಿ, ಕಲ್ಲು, ಮರ, ಗರಗಸ, ಗ್ರಹಣ, ಮೋಡಿಆಟ, ಪಾರದ, ಕಳೇರಿ, ಇತ್ಯಾದಿಗಳು ಇದ್ದು ಅವುಗಳ ಮೇಲೆ ಕೇಳುಗರಿಗೆ ಮನವರಿಕೆಯಾಗುವ ಹಾಗೆ ಕಲಾತ್ಮಕವಾಗಿ ವಿವರಣೆ ನೀಡಿ ವೃತ್ತಿಯನ್ನು ಮಾಡುವ ಕಸುಬುದಾರಿಕೆ ಇಲ್ಲಿದೆ. ಈ ಚಿತ್ರಗಳನ್ನು ಜಿನಗಾರರು ರಚಿಸಿಕೊಟ್ಟಿರುತ್ತಾರೆ. ಇದನ್ನು ಗೊಂದಲಿಗ ಬುಡಬುಡಕಿ, ರಾಮಕೊಂಡಡಿ, ಮುಂತಾದ ಜನಾಂಗಗಳವರು ವೃತ್ತಿಯಾಗಿಸಿಕೊಂಡಿದ್ದಾರೆ.

**4. ದಾರದ ಸಾಧನದ ಚಿತ್ರವಿನ್ಯಾಸಗಳು:** ದಾರದ ಸಾಧನದ ಮೇಲೆ ಹೊಲಿಗೆ, ಹೆಣಿಗೆ, ನೇಯ್ಗೆಯಲ್ಲಿ ಚಿತ್ರಗಾರಿಕೆ ಕಂಡುಬರುತ್ತದೆ. ಹೊಲಿಗೆಯ ಸಾಧನದ ಚಿತ್ರಕಲೆಯಲ್ಲಿ ಕೌದಿಯ ಕಲೆ ಮಹತ್ವವಾದುದಾಗಿದೆ.

**ಕೌದಿಯ ಕಲೆ:** ಹೊಲಿಗೆಯಿಂದ ನಿರ್ಮಾಣವಾಗುವ ಹಾಸಿಗೆ-ಹೊದಿಕೆಯಂತಹ ಅಗತ್ಯ ವಸ್ತುವಿನಲ್ಲಿ ಈ ಕಲೆ ಮೂಡಿಬಂದಿದೆ. ಪ್ರಯೋಜನಮೂಲದ ಹಿನ್ನೆಲೆಯಲ್ಲಿ ಆವಿರ್ಭವಿಸಿದ ಇದು ಮುಂದೆ ಸೌಂದರ್ಯವನ್ನು ಮೈಗೂಡಿಸಿಕೊಂಡು ಬೆಳೆದು ಬಂದಿದೆ. ಕೌದಿಯಲ್ಲಿ ಹಲವಾರು ವಿಧಗಳಿವೆ. ಮುಖ್ಯವಾಗಿ ದೊಡ್ಡವರ ಕೌದಿ ಮತ್ತು ಚಿಕ್ಕವರ ಕೌದಿಗಳು ಪ್ರಖ್ಯಾತವಾಗಿವೆ. ಈ ಕೌದಿಗಳಲ್ಲಿ ಹೊರಮೈ ಮತ್ತು ಒಳಮೈಗಳಿದ್ದು ಒಳಮೈಯಲ್ಲಿ ಕೌದಿಯ ಸೌಂದರ್ಯವನ್ನು ವಿಶೇಷವಾಗಿ ಕಾಣಬಹುದಾಗಿದೆ.

ಕೌದಿಯಲ್ಲಿ ರಾಮಾಯಣ, ಮಹಾಭಾರತ, ಐತಿಹಾಸಿಕ, ಧಾರ್ಮಿಕ, ಸಾಮಾಜಿಕ, ನೈಸರ್ಗಿಕ, ಅಲಂಕಾರಿಕ, ಮುಂತಾದ ರೀತಿಯ ಚಿತ್ರಗಳನ್ನು ಕಾಣಬಹುದು. ಕೌದಿಯ ಚಿತ್ರಗಳು ಆಕಾರ ಪಡೆಯುವುದು ಎರಡು ರೀತಿಯಿಂದ. ಒಂದು ದಾರದ ರೇಖಾ ವಿನ್ಯಾಸಗಳಿಂದಾದ ಚಿತ್ರಗಳು, ಇನ್ನೊಂದು ವಿವಿಧ ಆಕಾರದ ಬಣ್ಣದ ಅರಿವೆಯ ತುಕಡಿಗಳ ಸಂಯೋಜನಾ ಚಿತ್ರಗಳು. ಸುಳುಹು, ಪಶು, ಪಕ್ಷಿ, ಹೂ, ಎಲೆ, ಸೂರ್ಯ, ಚಂದ್ರ, ನಕ್ಷತ್ರದಂತಹ ಹಲವಾರು ವಿನ್ಯಾಸಗಳು ದಾರದಿಂದ ರೇಖೆಯ ರೂಪ ಪಡೆದರೆ, ಕೌದಿಯ ಸರ್ವ ಸಮಗ್ರ ಸೌಂದರ್ಯವಿರುವುದು ಬಣ್ಣದ ವಿನ್ಯಾಸದ ಚಿತ್ರಗಳಲ್ಲಿ. ಬಣ್ಣದ ಅರಿವೆಯ ತುಕಡಿಗಳ ಚೌಕಾಕೃತಿ, ತ್ರಿಕೋನಾಕೃತಿ, ಆಯತಾಕೃತಿ ಜಾಮಿತ್ರೀಯ, ಆಕೃತಿಯ ಚಿತ್ರಗಳು ಇಲ್ಲಿ ಹೆಚ್ಚಾಗಿ ಕಾಣಿಸುತ್ತವೆ. ಹೊಲಿಗೆ ಮುಗಿದ

ಮೇಲೆ ಈ ಬಣ್ಣದ ಪಟ್ಟಿಗಳು ಕೌದಿಯ ಮೇಲೆ ಬಣ್ಣ ಮೂಡಿದಂತೆ ಕಾಣಿಸುತ್ತವೆ. ಇಲ್ಲಿ ಜನಪದ ಕಲಾವಿದರ ಸೌಂದರ್ಯ ಪ್ರಜ್ಞೆಯನ್ನು ವಿಶೇಷವಾಗಿ ಕಾಣಬಹುದು. ಕೌದಿಯ ಚಿತ್ರನಿರ್ಮಾಣಕಾರರು ಹೆಚ್ಚಾಗಿ ಸ್ತ್ರೀಯರೇ ಇರುವುದು ವೈಶಿಷ್ಟ್ಯ. ಮುಸ್ಲಿಂ ಜನಾಂಗದವರ ಕೌದಿಗಳಲ್ಲಿ ಅರ್ಧಚಂದ್ರಾಕೃತಿ, ನಕ್ಷತ್ರಗಳಿದ್ದರೆ ಹಿಂದೂಗಳ ಕೌದಿಗಳಲ್ಲಿ ಪಾಂಡವರ ಪಗಡೆಯಾಟ, ಕೊಳಬಾಯಿ, ಸೀತೆಯ ಸೆರಗು, ಈಶ್ವರ, ಹನುಮಂತ ಮುಂತಾದ ದೇವರ ಚಿತ್ರಗಳು ಇದ್ದು, ಕ್ರೈಸ್ತರ ಮನೆಯ ಕೌದಿಗಳಲ್ಲಿ ಶಿಲುಬೆಯಾಕೃತಿಗಳು ಹೀಗೆ ವಿವಿಧ ಧರ್ಮದ ಜನರ ಧಾರ್ಮಿಕ ಹಿನ್ನೆಲೆಯ ಚಿತ್ರಗಳು ವಿಶೇಷವಾಗಿ ಕಂಡುಬರುತ್ತವೆ.

**ಹೆಣಿಗೆಯ ಕಸೂತಿ ಕಲೆ:** ಕೌದಿಯಂತಹ ಹೊಲಿಗೆಯ ಕಲೆಯ ಮುಂದುವರಿಕೆಯೇ ಈ ಕಸೂತಿಕಲೆ ಎನ್ನಬಹುದು. ಇಲ್ಲಿ ಹೊಲಿಗೆಗೆ ಬದಲು ಹೆಣಿಗೆ ಕಾಣಸಿಕೊಂಡಿದೆ.

ಸಾಮಾನ್ಯವಾಗಿ ಬಣ್ಣದ ದಾರಗಳಿಂದ ಬಟ್ಟೆಗಳಿಗೆ ಕಲಾತ್ಮಕವಾಗಿ ಮಾಡುವ ಹೆಣಿಗೆಯ ಅಲಂಕಾರವೇ ಕಸೂತಿಯಾಗಿದೆ. ಕೌದಿಕಲೆಯ ಸಹೋದರಕಲೆ ಕಸೂತಿ. ಕರ್ನಾಟಕದಲ್ಲಿ ಎರಡು ರೀತಿಯಲ್ಲಿ ಕಸೂತಿ ಹಾಕುವ ವಿಧಗಳಿವೆ. ಒಂದು ಕೈ ಕಸೂತಿ, ಇನ್ನೊಂದು ಯಂತ್ರದ ಕಸೂತಿ. ಕೈ ಕಸೂತಿಯಲ್ಲಿ ಹೊಲಿಗೆಯ ಕಸೂತಿ ಮತ್ತು ಹೆಣಿಗೆಯ ಕಸೂತಿಗಳಿವೆ. ಹೆಸರೇ ಸೂಚಿಸುವಂತೆ ಹೊಲಿಯುವಿಕೆಯ ಕಸೂತಿ, ಹೆಣಿಗೆಯಿಂದ ಹಾಕುವ ಕಸೂತಿಗಳಾಗಿವೆ, ಯಂತ್ರದ ಕಸೂತಿಯು ಯಂತ್ರದ ಸಹಾಯದಿಂದ ಹಾಕುವ ಕಸೂತಿಯಾಗಿದೆ.

ಕರ್ನಾಟಕದಲ್ಲಿ ನಾಲ್ಕು ರೀತಿಯ ಕಸೂತಿಯ ಪ್ರಕಾರಗಳಿವೆ 1. ಗಾಂವಟಿ ಕಸೂತಿ, 2. ಮೆಂತಿಕಸೂತಿ, 3, ನೇಯ್ಗೆ ಕಸೂತಿ, 4. ಮುರುಗಿ ಕಸಯಿ. ಕಸೂತಿಯಲ್ಲಿ ಧಾರ್ಮಿಕ, ಪೌರಾಣಿಕ, ಐತಿಹಾಸಿಕ, ಸಾಮಾಜಿಕ, ರಾಜಕೀಯ ಮುಂತಾದ ವೈವಿಧ್ಯಮಯವಾದ ವಿಷಯಗಳು ಕಂಡುಬರುತ್ತವೆ.

**ನೇಯ್ಗೆಯ ಚಿತ್ರಕಲೆ:** ಹೊಲಿಗೆಯ ಕಲೆ ಹೆಣಿಗೆ ಕಲೆಗೆ ಮೂಲವಾದಂತೆ ಹೆಣಿಗೆಕಲೆ ನೇಯ್ಗೆಯ ಕಲೆಗೆ ಮೂಲವಾಗಿದೆ. ಹೊಲಿಗೆ, ಹೆಣಿಗೆ, ನೇಯ್ಗೆ ಈ ಮೂರೂ ದಾರದ ಸಾಧನದಿಂದ ಪೂರ್ಣಗೊಂಡ ಕಲೆಗಳು.

ನೇಯ್ಗೆಯ ಕಲೆಯಲ್ಲಿ ಪ್ರಯೋಜನ ದೃಷ್ಟಿಗೂ ಸೌಂದರ್ಯದ ಅಭಿವ್ಯಕ್ತಿಗೂ ನೇರವಾದ ಪರಸ್ಪರ ಸಂಬಂಧವಿದೆ. ಪ್ರಾಚೀನ ಮಾನವ ನಾಗರಿಕತೆಯ ಹೊಸ್ತಿಲಲ್ಲಿ ಕಾಲಿಡುವಾಗ ತನ್ನ ಮೈಯನ್ನು ರಕ್ಷಿಸಿಕೊಳ್ಳಲು ತಯಾರಿಸಿದ ಬಟ್ಟೆಗಳನ್ನು ಉಡುಪುಗಳನ್ನಾಗಿ ಮಾಡಲು ಕಂಡುಕೊಂಡ ವಿಧಾನವೇ 'ನೇಯ್ಗೆ' ಎನ್ನಬಹುದು.

ನೇಯ್ಗೆಯೂ ಹೊದಿಕೆ ಮತ್ತು ಹಾಸಿಗೆಗಳಲ್ಲಿ ಕಂಡುಬರುತ್ತದೆ. ಹೊದಿಕೆಯಲ್ಲಿ ಕಂಬಳಿಗಳು, ಚಾದರಗಳನ್ನು ಹೆಸರಿಸಬಹುದು. ಇಲ್ಲಿ ಕರಿಯ ಕಂಬಳಿಯಲ್ಲಿ ಅಚ್ಚ ಬಿಳಿಯ ಪಟ್ಟಿಕೆಗಳು ಕಲಾತ್ಮಕವಾಗಿ ವಿನ್ಯಾಸಗೊಂಡಿರುತ್ತವೆ. ಕಂಬಳಿಯಲ್ಲಿ ಹುರಿಗಂಬಳಿ

ಮತ್ತು ಉಜ್ಜುಗಂಬಳಿಗಳೆಂದು ಎರಡು ವಿಧಗಳಿದ್ದು ಉಜ್ಜುಗಂಬಳಿ ಹೆಚ್ಚು ಕಲಾತ್ಮಕವಾಗಿರುತ್ತದೆ. ಬಣ್ಣ ಬಣ್ಣದ ಎಣ್ಣೆಯನ್ನು ಉಪಯೋಗಿಸಿ, ಚೌಕ ಆಯತದಂತಹ ಜ್ಯಾಮಿತೀಯ ಆಕೃತಿಯ ಚಿತ್ರವಿನ್ಯಾಸಗಳು ಕಂಡುಬರುತ್ತವೆ. ನೇಯ್ಗೆಯಿಂದ ತಯಾರಿಸುವ ಹಾಸಿಗೆಗಳಲ್ಲಿಯಂತು ಸುಂದರವಾದ ಚಿತ್ರವಿನ್ಯಾಸಗಳು ಹೆಚ್ಚು ಕಲಾತ್ಮಕವಾಗಿ ಇರುವುದನ್ನು ಕಾಣಬಹುದು. ಧಾರವಾಡ ಜಿಲ್ಲೆಯ ನವಲಗುಂದದ ಜಮಖಾನೆಗಳು ತುಂಬಾ ಪ್ರಸಿದ್ಧವಾಗಿವೆ. ಇದರಲ್ಲಿ ಪಗಡಿ, ಅಟ್ಟೆ, ಚೌಪಟ ಶತರಂಜ, ಎಂಬ ವಿವಿಧ ರೀತಿಯ ಚಿತ್ರ ವಿನ್ಯಾಸಗಳ ಪ್ರಕಾರಗಳಿವೆ. ಜಮಖಾನೆಗಳಲ್ಲಿ ಪಗಡೆಯಾಟ, ಹೂಗಳು, ನವಿಲುಗಳು, ಹೀಗೆ ಹಲವಾರು ಉಪ ವಿನ್ಯಾಸಗಳು ಕಂಡುಬರುತ್ತವೆ. ಹಾಗೆಯೇ ಸೀರೆಗಳಲ್ಲಿ ಕೂಡ. ಎಲೆ, ಹೂ, ಬಳ್ಳಿಗಳ ಕಲಾತ್ಮಕ ವಿನ್ಯಾಸಗಳಿಗೆ ಕೊರತೆಯಿಲ್ಲ. ವಿವಿಧ ಬಣ್ಣಗಳ ಸೀರೆಗಳಲ್ಲಿ ನೈಸರ್ಗಿಕ ವಿನ್ಯಾಸದ ಚಿತ್ರಗಳು, ಜ್ಯಾಮಿತೀಯ ಆಕೃತಿ ವಿನ್ಯಾಸಗಳು ಪ್ರಮುಖವಾಗಿ ಕಂಡುಬರುತ್ತವೆ. ಹೀಗೆ ನೇಯ್ಗೆಯ ಈ ಕಲೆ ಕರಕುಶಲಕಲೆಯಾಗಿ ವಾಣಿಜ್ಯ ಕ್ಷೇತ್ರದಲ್ಲಿ ವಿಸ್ತರಿಸಿಕೊಂಡಿದೆ.

**ಇತರ ಸಾಧನದ ಚಿತ್ರಗಳು:** ಜನಪದ ಚಿತ್ರಕಲೆ ಈ ಹಿಂದೆ ವಿವೇಚಿಸಿದ ವಸ್ತ್ರಗಳಲ್ಲಿ ಮಾತ್ರವಲ್ಲದೆ ಕಟ್ಟಿಗೆ, ಲೋಹಗಳ ಉಪಕರಣಗಳಲ್ಲಿಯೂ, ಮಣ್ಣಿನಿಂದ ಮಾಡಿದ ಮಡಿಕೆ ಕುಡಿಕೆಗಳಲ್ಲಿ, ಬಿದಿರಿನಿಂದ ಮಾಡಿದ ಬುಟ್ಟಿ ಚಾಪೆಗಳ ವಸ್ತುಗಳಲ್ಲಿಯೂ, ದಂತದ ಕೆತ್ತನೆಯಂತಹ ವಸ್ತುಗಳಲ್ಲಿಯೂ ಕಾಣಿಸಿಕೊಂಡಿದೆ.

**2. ಮನರಂಜನ ಮೂಲ ಜನಪದ ಚಿತ್ರಕಲೆ:** ಜನಪದರು ಸೌಂದರ್ಯಮೂಲದ ಚಿತ್ರಕಲೆಯನ್ನು ಪ್ರಯೋಜನದ ಹಿನ್ನೆಲೆಯಲ್ಲಿ ಬೆಳೆಸಿಕೊಂಡು ಬಂದಂತೆ ಮನರಂಜನೆಯ ಸಾಧನವಾಗಿಯೂ ಬಳಸಿಕೊಂಡು ಬಂದಿದ್ದಾರೆ. ದಿನದ ಸಂಘರ್ಷದ ಬದುಕಿನಲ್ಲಿ ಕುಗ್ಗಿದ ಮನಸ್ಸಿಗೆ ವಿಶ್ರಾಂತಿಯನ್ನು ನೀಡಲು ಜನಪದರು ತಮ್ಮದೇ ಆದ ಮನರಂಜನೆಯ ಸಾಧನ ಸಲಕರಣೆಗಳನ್ನು ಬಳಕೆಗೆ ತಂದರು. ತನ್ನ ಸಂತೋಷಕ್ಕೆ ಕಾರಣವಾದ ಸಾಧನೋಪಕರಣಗಳು ಇತರರಿಗೂ ಆಕರ್ಷಕವಾಗಿ ಕಾಣಬೇಕೆಂಬ ಹಂಬಲಗಳ ಆಶಯಗಳಲ್ಲಿ ಮನರಂಜನಮೂಲದ ಜನಪದ ಚಿತ್ರಕಲೆಯ ಬೆಳವಣಿಗೆಯನ್ನು ಗುರುತಿಸಬಹುದಾಗಿದೆ. ಪ್ರಾಚೀನ ಕಾಲದಿಂದಲೂ ಮನರಂಜನೆಯ ಸಾಧನವಾಗಿ ಅನೇಕ ಆಟಗಳು ಹುಟ್ಟಿಬಂದಿವೆ. ಈ ಆಟಗಳಲ್ಲಿ ಚಿತ್ರಕಲೆಯ ಹಲವಾರು ವಿನ್ಯಾಸಗಳಿವೆ. ಅವುಗಳಲ್ಲಿ ಮಾದರಿಗಾಗಿ ಕೆಲವನ್ನು ಇಲ್ಲಿ ಚರ್ಚಿಸಬಹುದಾಗಿದೆ.

### ಗಂಜೀಫಾ ಎಲೆಗಳಲ್ಲಿಯ ಚಿತ್ರಕಲೆ:

ಪ್ರಾಚೀನ ಕಾಲದಿಂದಲೂ ಪ್ರಚಲಿತವಿರುವ 'ಗಂಜೀಫಾ' ಆಟ ಇಂದಿನ ಇಸ್ಪೀಟ್ ಮಾದರಿಯ ಚಿತ್ರಗಳಿರುವ ಎಲೆಯ ಆಟ. ಕಾರ್ಡು(ಬಿಲ್ಲೆ)ಗಳ ಮೇಲೆ ಬರೆದ ಚಿತ್ರಗಳ ವಿಷಯಗಳ ಮೇಲಿಂದ ವಿವಿಧ ರೀತಿಯ ಆಟ ಆಡುತ್ತಿದ್ದರು. ಸಾಮಾನ್ಯವಾಗಿ ಈ ಆಟವನ್ನು 'ಗಂಜೀಫಾ ಆಟ'ವೆಂದು ಕರೆಯುತ್ತಾರೆ. ಈ ಆಟದ ಬಿಲ್ಲೆಗಳ ಮೇಲಿರುವ ಸೂಕ್ಷ್ಮವಾದ ಚಿಕ್ಕಗಾತ್ರದ ಚಿತ್ರಗಳು ಗಂಜೀಫಾ ಚಿತ್ರಕಲೆ ಎಂದು ಪ್ರಸಿದ್ಧಿ ಪಡೆದಿವೆ.



ಗೌರಿ



ಮರದ ಶಿಲ್ಪ



ದೈಮಾಬಾದ್: ಶಿಲಾ-ತಾಮ್ರಯುಗ ನೆಲೆಯಲ್ಲಿ ದೊರೆತ ವರ್ಣಚಿತ್ರಿತ ಮಣ್ಣಿನ ದೊಡ್ಡ ಪಾತ್ರೆ

ಗಂಜೀಫಾ ಕಾರ್ಡುಗಳು ಸುಮಾರು ಎರಡು ಅಂಗಲದಿಂದ ನಾಲ್ಕು ಅಂಗಲದವರೆಗೆ ವೃತ್ತಾಕಾರವಾಗಿ, ಆಯತಾಕಾರವಾಗಿ, ಮೊಟ್ಟೆಯಾಕಾರದಲ್ಲಿಯೂ ಇದ್ದುದು ತಿಳಿದುಬರುತ್ತದೆ. ಮೈಸೂರು ಅರಸು ಮನೆತನದ ಮುಮ್ಮಡಿ ಕೃಷ್ಣರಾಜ ಒಡೆಯರ ಅವರ ಕಾಲದ 'ಶ್ರೀ ತತ್ವನಿಧಿ' ಗ್ರಂಥದಲ್ಲಿ 13 ಬಗೆಯ ಗಂಜೀಫಾ ಆಟಗಳ ವಿವರಣೆ ಇದೆ.

ಈ ವರ್ಣಚಿತ್ರಗಳಿಗೆ ಬಳಸುವ ಕಪ್ಪು, ಕಂದು, ಬಿಳಿ, ಹಳದಿ, ಮೊದಲಾದ ವರ್ಣಗಳನ್ನು ಕಲಾವಿದರೇ ಸ್ಥಳೀಯವಾಗಿ ಸಿಗುವ ಬೇರೆ ಬೇರೆ ಬಣ್ಣದ ಮಣ್ಣು, ವಿವಿಧ ಗಿಡ ಸಸ್ಯಾವಳಿಗಳ ರಸ, ಗುಲಗಂಜಿಕಾಯಿ, ಬೀಜ ಮುಂತಾದ ವಸ್ತುಗಳಿಂದ, ಕೆಲವು ಸಲ ಬಂಗಾರ, ಬೆಳ್ಳಿಗಳನ್ನು ಚಿತ್ರಕ್ಕಾಗಿ ಬಳಸುತ್ತಿದ್ದುದು ತಿಳಿಯುತ್ತದೆ. ಬಣ್ಣ ಸರಿಯಾಗಿ ಕುಳಿತುಕೊಳ್ಳಲು ಅಂಟವಾಳಕಾಯಿ ರಸ, ಮೇಣ, ಕೋಳಿ ತತ್ತಿಯರಸ ಹೀಗೆ ಬೇರೆ ಬೇರೆ ವಸ್ತುಗಳನ್ನು ಉಪಯೋಗಿಸಲಾಗುತ್ತಿತ್ತು. ಭಯ, ಭಕ್ತಿ, ಶ್ರದ್ಧೆಗಳು ಈ ಗಂಜೀಫಾ ಚಿತ್ರ ರಚನೆಯ ಹಿಂದೆ ಕೆಲಸ ಮಾಡಿವೆ. ಈ ಆಟಕ್ಕೆ ದೇವರಾಟವೆಂಬ ಹೆಸರು ಇದೆ. ದಶಾವತಾರ, ರಾಮಾಯಣ, ಮಹಾಭಾರತ ಮುಂತಾದ ಧಾರ್ಮಿಕ ಹಾಗೂ ಧಾರ್ಮಿಕೇತರ ರೀತಿಯ ಚಿತ್ರಗಳು ಇಲ್ಲಿ ಕಂಡುಬರುತ್ತವೆ.

## ತೊಗಲುಗೊಂಬೆಯಾಟದ ಚಿತ್ರಕಲೆ:

ಜಗತ್ತಿನ ಜನಪದ ವರ್ಣಚಿತ್ರಕಲಾ ಪ್ರಪಂಚಕ್ಕೆ ಭಾರತದ ಅಮೂಲ್ಯ ಕೊಡುಗೆ ಈ ತೊಗಲುಗೊಂಬೆ ಚಿತ್ರಕಲೆ. ಇದರ ಮುಂದುವರಿದ ರೂಪವೇ ಇಂದಿನ ಚಲನಚಿತ್ರ, ದೂರದರ್ಶನಗಳೆನ್ನಬಹುದು. ತೆರೆಯ ಹಿಂದೆ ವರ್ಣರಂಜಿತ ಮಾಯಾಲೋಕವನ್ನು ಸೃಷ್ಟಿಸುವ ಅದ್ಭುತ ಕೈಚಳಕದ ಈ ಕಲೆ, ಕೇವಲ ಒಬ್ಬ ವ್ಯಕ್ತಿಗೆ, ಸೀಮಿತವಾಗಿರದೆ ಇಡೀ ಕುಟುಂಬದ ಜನರನ್ನು ತೊಡಗಿಸಿಕೊಳ್ಳುವ ಜನಸಮುದಾಯದ ಕಲೆಯಾಗಿದೆ.

ತೊಗಲಿನಲ್ಲಿ ವಿವಿಧ ರೀತಿಯ ಚಿತ್ರಗಳನ್ನು ಕೊರೆದು, ವಿವಿಧ ರೀತಿಯ ವರ್ಣಲೇಪನ ಮಾಡಿ, ರಂಗದ ಮೇಲೆ ರಾತ್ರಿ ಹೊತ್ತು ದೀಪದ ಬೆಳಕಿನಲ್ಲಿ ಹಿಂದೆ ವಾದ್ಯಮೇಳದೊಂದಿಗೆ ವಿವಿಧ ಕಥಾನಕಗಳನ್ನು ಆಡಿಸುವ ಆಟವೇ ತೊಗಲುಗೊಂಬೆಯಾಟವಾಗಿದೆ.

ಕರ್ನಾಟಕದಲ್ಲಿ ಈ ತೊಗಲುಗೊಂಬೆಯ ಚಿತ್ರಗಳನ್ನು ಉಪಯೋಗಿಸಿ, ಆಟವಾಡಿಸುವ ವಿಶೇಷ ಜನಾಂಗವೊಂದಿದ್ದು, ಅವರನ್ನು 'ಕಿಳ್ಳೇಕ್ಯಾತ'ರೆಂದು ಕರೆಯುತ್ತಾರೆ. ಇವರ ಆಟವನ್ನು 'ಕಟಬರಾಟ', 'ಗೊಂಬೆಯಾಟ', 'ಕಿಳ್ಳೇಕ್ಯಾತರಾಟ', 'ಚಿತ್ರಮರಾಠಿಗರಾಟ', ಕಥಾನಾಯಕರಾಟ', 'ತೋಲುಬೊಮ್ಮಲಾಟ'ವೆಂದು ಪ್ರಸಿದ್ಧವಾಗಿದೆ.

ತೊಗಲುಗೊಂಬೆಯ ಚಿತ್ರಕಲೆಯಾಟ ಅಪ್ಪಟ ಜನಪದ ಮೂಲದಿಂದ, ಜನಪದೀಯ ಅಂಶಗಳಿಂದ ಕೂಡಿ ಬೆಳೆದುಬಂದಿದೆ. ಮೇಕೆ, ಕುರಿ, ಎಮ್ಮೆ, ಕತ್ತೆ ಹಾಗೂ ಒಂಟೆಯ ಚರ್ಮವನ್ನು ಉಪಯೋಗಿಸಿ ಈ ತೊಗಲುಗೊಂಬೆ ಚಿತ್ರಗಳನ್ನು ರಚಿಸಲಾಗುತ್ತದೆ. ಇಲ್ಲಿ ಕೆಂಪು, ಕಪ್ಪು, ಹಳದಿ, ನೀಲಿ, ಹಸಿರು, ಮದರಂಗಿ ಬಣ್ಣವನ್ನು ಬಳಸಲಾಗುತ್ತದೆ. ಹಳ್ಳಿಗಳಲ್ಲಿ ಮಳೆಗಾಲ ಹೊರತುಪಡಿಸಿ, ಈ ಆಟವನ್ನು ರಾತ್ರಿಯಿಡೀ ದೀಪದ ಬೆಳಕಿನಲ್ಲಿ ಪ್ರದರ್ಶನ ಮಾಡುತ್ತಾರೆ.

ಕರ್ನಾಟಕದ ತೊಗಲುಗೊಂಬೆಯ ಚಿತ್ರಗಳಲ್ಲಿ ಎರಡು ರೀತಿ ವಿಂಗಡಣೆಯನ್ನು ಮಾಡಬಹುದಾಗಿದೆ. ಒಂದು: ಉತ್ತರ ಕರ್ನಾಟಕದ 'ಬಡಗಲ ಪಾಯದ ತೊಗಲುಗೊಂಬೆ ಚಿತ್ರಗಳು', ಇನ್ನೊಂದು ಹಳೆಯ ಮೈಸೂರು ಭಾಗದ ತೆಂಕಲು ಪಾಯದ ತೊಗಲುಗೊಂಬೆ ಚಿತ್ರಗಳು. ಈ ತೊಗಲುಗೊಂಬೆಯ ಚಿತ್ರಗಳ ವಸ್ತುವಿಷಯ ತುಂಬಾ ವ್ಯಾಪಕವಾದುದಾಗಿದೆ. ಮಕ್ಕಳು, ದೊಡ್ಡವರು (ಪುರುಷ-ಸ್ತ್ರೀ) ಪ್ರಾಣಿ, ಪಕ್ಷಿಗಳು, ನಿಸರ್ಗದ ದೃಶ್ಯಗಳು, ಯುದ್ಧದ ಸನ್ನಿವೇಶಗಳು, ಬಿಲ್ಲು, ಬಾಣಗಳಂತಹ ವಸ್ತು ವೈವಿಧ್ಯತೆಗಳ ಚಿತ್ರಗಳು ಇವೆ. ಈ ಚಿತ್ರಗಳು ದಶಾವತಾರ, ರಾಮಾಯಣ ಮಹಾಭಾರತ ಹಾಗೂ ಸಾಮಾಜಿಕ ಹಿನ್ನೆಲೆಯ ಕಥೆಗಳಿಗೆ ಅನುಸಾರವಾಗಿ ವೈಭವಪೂರ್ಣವಾಗಿ ರಚನೆಗೊಂಡಿವೆ.

ಪರದೆಯ ಹಿಂದಿನ ಬೆಳಕಿನಲ್ಲಿರುವ ಚಿತ್ರಗಳು, ಪರದೆಯ ಮುಂಭಾಗದ ಪಾರದರ್ಶಕ ನೆರಳಾಗಿ ಪ್ರೇಕ್ಷಕರಿಗೆ ಕಾಣಿಸಿಕೊಳ್ಳುತ್ತವೆ. ಗೊಂಬೆ ಆಡಿಸುವವರು ಪಾತ್ರಕ್ಕೆ ತಕ್ಕಂತೆ ಗೆಜ್ಜೆನಾದ, ಮಾತಿನ ಚಕಮಕಿ ಸಂಗೀತದ ಮೇಳವು ಈ ಕಲೆಗೆ ಜೀವಂತಿಕೆಯ ಸ್ವರೂಪವನ್ನು ತಂದಿದೆ.

## ಸೂತ್ರದ ಗೊಂಬೆಯಾಟದ ಚಿತ್ರಕಲೆ:

ಸೂತ್ರದ ಗೊಂಬೆಯ ರಚನೆಯ ವಿಧಾನಗಳು ಪ್ರಾದೇಶಿಕವಾಗಿ ಭಿನ್ನ ಭಿನ್ನವಾಗಿ ಕಂಡುಬರುತ್ತವೆ. ಕರ್ನಾಟಕದಲ್ಲಿ ಅತ್ತಿ, ಹಾಲವಾಣ, ಕಡವಲ ಮರದಿಂದಲೂ ಸಿಬಿರುಬಾರದ ಹಗುರಾದ 'ಮರಾಲಿ'ಮರದ ಕಟ್ಟಿಗೆ ಗೊಂಬೆಗಳ ರಚನೆಯಲ್ಲಿ ಹೆಚ್ಚಾಗಿ ಬಳಸಲಾಗುತ್ತದೆ. ಸೂತ್ರದ ಗೊಂಬೆಗಳ ನಿರ್ಮಾಣ ಹಂತದಲ್ಲಿ ಕಟ್ಟಿಗೆಯ ಆಯ್ಕೆ, ಬೇಕಾದ ಗಾತ್ರಕ್ಕೆ ಕಟ್ಟಿಗೆಯ ಬಿಡಿಭಾಗಗಳ ತಯಾರಿಕೆ, ಎದೆ, ತೋಳು, ಮುಂಗೈ, ಹಸ್ತ, ತೊಡೆ, ಮುಂಗಾಲು, ಪಾದ, ಹೀಗೆ ಸಿದ್ಧಗೊಳಿಸಿಕೊಳ್ಳಲಾಗುತ್ತಿದೆ. , ಹೀಗೆ ಸಿದ್ಧವಾದ ನಂತರ ಗೊಂಬೆಗಳಿಗೆ ಕೀಲು ಜೋಡಿಸಲಾಗುತ್ತವೆ. ಇದು ತುಂಬ ಮಹತ್ವದ ಹಂತವೆಂದು ಹೇಳಲಾಗುತ್ತದೆ. ಇಲ್ಲಿ ಕನಿಷ್ಠ ಆರು ಸೂತ್ರಗಳನ್ನು ಜೋಡಿಸಲಾಗುತ್ತದೆ. ಮುಖದ ಎಡಬಲಕ್ಕೆ ಎರಡು, ಒಂದು ಕೋಲಿಗೆ ಕೈಗಳಿಗೆ ಕಟ್ಟಿದ ಸೂತ್ರಗಳು ಕಾಲಿಗೆ ಕಟ್ಟಿದ ಎಗಡು ಸೂತ್ರಗಳು ಮೂರನೆಯ ಕೋಲಿಗೆ ಹೀಗೆ ಅಂಗಾಂಗಗಳ ಚಲಿಸುವಿಕೆಗೆ ಅನುಗುಣವಾಗಿ ಈ ಸೂತ್ರದ ಜೋಡಣೆ ಇನ್ನೂ ಹೆಚ್ಚಿಗೆ ಆಗುವುದು ಉಂಟು. ಈ ಸೂತ್ರಗಳಿಗೆ ಜವಿ, ಕಪ್ಪುದಾರ, ತಂತಿ, ನಾರಾಚಗಳನ್ನು ಬಳಸುತ್ತಾರೆ.

ಸೂತ್ರದ ಗೊಂಬೆಗಳ ವರ್ಣಾಲಂಕಾರ, ವೇಷ-ಭೂಷಣಗಳ ವಿನ್ಯಾಸ ಸೂತ್ರದ ಗೊಂಬೆಯ ರಚನೆಯ ಇನ್ನೊಂದು ಮಹತ್ವದ ಹಂತವೆಂದು ಹೇಳಬಹುದು. ನಯಗೊಳಿಸಿದ ಕಟ್ಟಿಗೆ ಬಿಡಿಭಾಗಗಳಿಗೆ, ಅದರಲ್ಲೂ ಮುಖಕ್ಕೆ ಹೆಚ್ಚಿನ ಮಹತ್ವವನ್ನು ಕೊಡಲಾಗುತ್ತದೆ. ಹರಿದಾಳ, ನೀಲಿ, ಕೆಂಪು, ಬಿಳಿ ಬಣ್ಣದ ಜೊತೆಗೆ ಗಚ್ಚಿನ ಎಣ್ಣೆ, ಅರಗು ಬಳಸಿಕೊಂಡು ಮುಖಕ್ಕೆಲ್ಲ ಹರಿದಾಳದ ಲೇಪನಮಾಡಿ ನಂತರ ಕಣ್ಣಿನ ಅಲಂಕಾರ ಮಾಡುತ್ತಾರೆ. ಬಯಲಾಟದ ಪಾತ್ರಗಳಿಗೆ ಹಚ್ಚುವಂತೆ ಇಲ್ಲಿಯೂ ವಿವಿಧ ಪಾತ್ರದ ಗೊಂಬೆಗಳಿಗೆ ಆಯಾ ಪಾತ್ರಗಳ ಸ್ವಭಾವಕ್ಕೆ ಅನುಗುಣವಾಗಿ ಬಣ್ಣಲೇಪನ ಮಾಡುತ್ತಾರೆ. ಮುಖವರ್ಣಿಕೆ

ಅತ್ಯಂತ ಆಕರ್ಷಕವಾಗಿರುತ್ತದೆ. ಇಲ್ಲಿ ಚಿತ್ರಕಾರನ ಪರಿಶ್ರಮ, ಕಲ್ಪನಾಶೀಲತೆಗಳು ಎದ್ದು ಕಾಣುತ್ತವೆ. ಮುಖ, ಪಾದ, ಹಸ್ತ ಮುಂಗೈಗಳಲ್ಲಿ ಮಾತ್ರ ವರ್ಣಲೇಪನ ಮಾಡಲಾಗುತ್ತದೆ. ಗೊಂಬೆಯ ಶರೀರದ ಇನ್ನುಳಿದ ಭಾಗಗಳು ಆಯಾ ಪಾತ್ರದ ಗುಣಧರ್ಮಕ್ಕನುಗುಣವಾಗಿ ವೇಷ-ಭೂಷಣವನ್ನು ವಿನ್ಯಾಸಗೊಳಿಸಲಾಗುತ್ತಿದೆ. ಹೀಗೆ ಅಂಗಾಂಗಗಳೆಲ್ಲ ತುಂಬ ಕಲಾತ್ಮಕವಾದ ಅಲಂಕಾರಗಳಿಂದ ಕೂಡಿರುತ್ತವೆ.

ಗೊಂಬೆಗಳ ಮುಖದಲ್ಲಿಯ ವರ್ಣಗಳು ಬಹುಕಾಲ ಬಾಳಿಕೆ ಬರುವ ಸಲುವಾಗಿ ಬೇವಿನ ಅಂಟು ಲೇಪಿಸುವುದೂ ಉಂಟು. ಶ್ರೀರಾಮ, ಕೃಷ್ಣ, ಪರಶುರಾಮ, ಆಂಜನೇಯ ಮುಂತಾದ ಗೊಂಬೆಗಳ ಮುಖಕ್ಕೆ ನೀಲಿಬಣ್ಣ, ಉಗ್ರಪಾತ್ರಗಳ ಗೊಂಬೆಗಳಿಗೆ ಕೆಂಪುವರ್ಣ, ರಾಕ್ಷಸ ಮುಂತಾದ ಪಾತ್ರಗಳಿಗೆ ಕಪ್ಪುಬಣ್ಣದ ಲೇಪನ ಮಾಡುತ್ತಾರೆ. ರೌದ್ರತೆಯನ್ನು ಬಿಂಬಿಸಲೂ ಕಪ್ಪು, ಬಿಳಿಬಣ್ಣದ ಚುಕ್ಕೆ ಇಡುತ್ತಾರೆ. ಗೊಂಬೆಗಳ ಹಣೆಯ ಮೇಲೆ ಬಿಳಿ ಮತ್ತು ಕೆಂಪು ನಾಮವನ್ನು, ವಿಭೂತಿ, ಗಂಧದ ಬೊಟ್ಟುಗಳನ್ನು ಮಾಡಲಾಗುತ್ತದೆ. ಕೋಳಿಯ ಮೊಟ್ಟೆ ಬಿಳಿಯ ದ್ರವವನ್ನು ಬಣ್ಣಗಳೊಡನೆ ಬೆರೆಸಿ ಬಳಸಿದ ಗೊಂಬೆಗಳು ಹೆಚ್ಚು ಹೊಳಪನ್ನು, ಸ್ಥಿರತೆಯನ್ನು ತರುತ್ತವೆ. ಹೀಗೆ ಸೂತ್ರದ ಗೊಂಬೆಗಳಲ್ಲಿ ವೇಷ ಭೂಷಣಗಳಂತೆ ವರ್ಣವಿನ್ಯಾಸವು ಮಹತ್ವದ ಅಂಶವಾಗಿ ಪರಿಗಣಿತವಾಗುತ್ತದೆ.

## ಯಕ್ಷಗಾನ, ದೊಡ್ಡಾಟಗಳಲ್ಲಿಯ ಚಿತ್ರಕಲೆ

**ಯಕ್ಷಗಾನದ ಮುಖವರ್ಣಿಕೆ:** ಯಕ್ಷಗಾನದ ಮುಖವರ್ಣಿಕೆ, ಚಿತ್ರಕಲೆಯ ದೃಷ್ಟಿಯಿಂದ ಮಹತ್ವಪೂರ್ಣವಾದುದಾಗಿದೆ. ಮುಖವರ್ಣಿಕೆಗಾಗಿ ಬಳಸುವ ವಸ್ತುಗಳು ನೈಸರ್ಗಿಕವಾದವುಗಳಾಗಿದ್ದು, ಅವು ಹೀಗಿರುತ್ತವೆ: 1) ಅರದಾಳ, (ಅರಿಷಿನ ಬಣ್ಣದ ಹರಳು), 2) ಇಂಗಳೀಕ(ಕೆಂಪು ಪುಡಿ) 3) ಎಣ್ಣೆ ಮಸಿ(ಎಳ್ಳೆಣ್ಣೆಯ ಕಾಡಿಗೆ), 4) ಪಚ್ಚೆ, ಕುಂಕುಮ, ಬಿಳಿಬಣ್ಣಗಳು, 5) ಅಕ್ಕಿಯ ಹಿಟ್ಟು, 6) ಸುಣ್ಣ, 7) ಹತ್ತಿ (ಅರಳೆ) 8) ತೆಂಗಿನಮರದ ಗರಿಯಕಡ್ಡಿ, 9) ಅಂಟಿಸುವ ಬೋನವನ್ನು ತಯಾರಿಸುವ ಅನ್ನ, 10) ವಿಭೂತಿ ಈ ಮುಂತಾದ ವಸ್ತುಗಳನ್ನು ಬಳಸಿಕೊಂಡು ಯಕ್ಷಗಾನದ ಪಾತ್ರಧಾರಿಗಳಿಗೆ ಮುಖವರ್ಣಿಕೆ ಮಾಡಲಾಗುತ್ತದೆ. ರಂಗಪ್ರವೇಶಿಸುವುದಕ್ಕಿಂತ ಪೂರ್ವದಲ್ಲಿ ಚೌಕಿಯಲ್ಲಿ ಬಣ್ಣ ಬಳಿದುಕೊಳ್ಳಲು ದೀಪದ ಸಮೆ, ಎಣ್ಣೆ, ಜೇಡಿ, ಚುಟ್ಟಿಗೆ ಮುಂತಾದ ವಸ್ತುಗಳನ್ನು ಇಟ್ಟಿರುವರು. ಇಲ್ಲಿ ಹಳದಿ, ಕೆಂಪು ಹುಡಿಗಳನ್ನು ವಿಶೇಷವಾಗಿ ಬಳಸುತ್ತಾರೆ. ಗಡ್ಡ, ಮೀಸೆ ಮತ್ತು ಕೇಶಭಾರಗಳನ್ನು ಕೂದಲಿನಿಂದ ಮಾಡುತ್ತಾರೆ. ಆಭರಣಗಳಿಗೆ ಬಂಗಾರ ಬಣ್ಣದ ಬೇಗಡಿ ಅಂಟಿಸುತ್ತಾರೆ. ಆಯಾ ಪಾತ್ರದವರೇ ಹೆಚ್ಚಾಗಿ ತಮ್ಮ ಮುಖವರ್ಣಿಕೆ ಮಾಡಿಕೊಳ್ಳುವರು.

ಹಿಂದೆ ಬಣ್ಣಗಳನ್ನು ನೀರಿನಲ್ಲಿ ಕಲಿಸುತ್ತಿದ್ದರಂತೆ. ಈಗ ಎಣ್ಣೆಯಲ್ಲಿ ಕಲಿಸಿಕೊಳ್ಳುತ್ತಾರೆ. ಯಕ್ಷಗಾನದ ಸ್ತ್ರೀ ಪುರುಷ ಪಾತ್ರಧಾರಿಗಳ ಮುಖ್ಯ ವರ್ಣಗಾರಿಕೆ, ಗೌರವರ್ಣ. ಇದಕ್ಕೆ 'ಚಾಯ' ಎನ್ನುತ್ತಾರೆ. ಹಳದಿ ಮತ್ತು ಕೆಂಪು ಮಿಶ್ರಣದ ವರ್ಣವಿದಾಗಿದೆ. ಈ ಗೌರವರ್ಣವನ್ನು ಬಳಿದ ಬಳಿಕ, ಹಲವಾರು ಬಗೆಯ ಅಲಂಕಾರ ವಿನ್ಯಾಸ ಮಾಡುತ್ತಾರೆ.

ಅವು ಈ ರೀತಿ ಇರುತ್ತವೆ: 1. ನಾಮ, 2. ಚಿಹ್ನೆ, 3. ಮುದ್ರೆ, 4. ಗೀರು, 5. ಗೀರುಗಂಧ, 6. ಮುತ್ತರಿ, 7 ವರ್ಣಛಾಯೆ, 8. ಚುಟ್ಟಿ, 9. ಸುಳಿ, 10. ಅಂಟಿಸುವ ಹತ್ತಿಯ ಗೊಂಡೆ ಇತ್ಯಾದಿಯಾಗಿ ಇವೆ.

ಬಣ್ಣದ ವೇಷ: ಬಣ್ಣದ ವೇಷಗಳಲ್ಲಿ ಮುಖವರ್ಣಿಕೆ ಚುಟ್ಟಿಯ ರಚನಾ ವಿನ್ಯಾಸಗಳು ಪ್ರತಿಯೊಂದು ಪಾತ್ರಕ್ಕೂ ಭಿನ್ನವಾಗಿರುತ್ತವೆ.

ಈ ಬಣ್ಣದ ವೇಷಗಳಲ್ಲಿ ಗಂಡುಬಣ್ಣ ಮತ್ತು ಹೆಣ್ಣುಬಣ್ಣವೆಂದು ಎರಡು ಪ್ರಕಾರಗಳಿವೆ. ಜರಾಸಂಧ, ನರಕಾಸುರ, ರಾವಣ ಮುಂತಾದುವು ಗಂಡು ಬಣ್ಣದವುಗಳಾದರೆ ಶೂರ್ಪನಖಿ, ಲಂಕಿಣಿ, ತಾಟಕಿ, ಪೂತನಿ, ಅಜಮುಖಿ ಮುಂತಾದ ಉಗ್ರಸ್ವಭಾವದ ರಾಕ್ಷಸಿ ವೇಷಗಳಿಗೆ ಹೆಣ್ಣು ಬಣ್ಣದವೆಂದು ಕರೆಯಲಾಗುತ್ತದೆ. ಗಂಡು ಬಣ್ಣದಲ್ಲಿ ಒಂದು: ರಾಜ ಬಣ್ಣ (ತಾರಕಾಸುರ, ರಾವಣ, ಮೈರಾವಣ, ಮೂಲಕಾಸುರ, ಶೂರಪದ್ಮ, ಕುಂಭ, ಖರ ಮೊದಲಾದವರು ಒಂದನೇ ವರ್ಗದ ಬಣ್ಣದ ವೇಷಗಳು); ಇನ್ನೊಂದು: ಕಾಟು ಬಣ್ಣ (ಕಿಮ್ಮೀರ, ಬಕಾಸುರ ಮುಂತಾದವರು)ವೆಂದು ಎರಡು ಪ್ರಕಾರಗಳಿರುತ್ತವೆ. ಇಲ್ಲಿಯ ವೇಷಗಳಿಗೆ ಹಣೆಯ ಎರಡೂ ಕೊನೆಗಳಲ್ಲಿ ಕಣ್ಣುಗಳನ್ನು ಬರೆಯುತ್ತಾರೆ. ಮುಖವರ್ಣಿಕೆ ವಿಕಟವೂ, ಭೀಕರವೂ ಆಗಿರುವಂತೆ ಚಿತ್ರಿಸುತ್ತಾರೆ.

ಮುಖವರ್ಣಿಕೆಯಂತೆ ಕಿರೀಟದ ವಿನ್ಯಾಸಗಳೂ ಅಲಂಕಾರಿಕವಾಗಿವೆ. ಇಲ್ಲಿ ಬಣ್ಣದ ಹಾಳೆಗಳನ್ನು ರೇಖಾಚಿತ್ರಗಳ ಪಟ್ಟಿಗಳಿಂದ ಅಲಂಕರಣ ಮಾಡಿರುತ್ತಾರೆ. ಹಾಗೆಯೇ ಭುಜದ ಎದೆಗಳ ಮೇಲೆ ಕೈ, ರಟ್ಟೆಗಳಿಗೆ ವರ್ಣವಿನ್ಯಾಸದ ಕಟ್ಟುಗಳಿದ್ದು ಕಲಾತ್ಮಕವಾಗಿರುತ್ತವೆ.

**ದೊಡ್ಡಾಟಗಳ ಮುಖವರ್ಣಿಕೆ:** ಉತ್ತರ ಕರ್ನಾಟಕದಲ್ಲಿ ಪ್ರಚಲಿತದಲ್ಲಿರುವ ದಾಸರಾಟ, ಶರಣರಾಟ, ಸಣ್ಣಾಟ, ದೊಡ್ಡಾಟದ ಬಯಲಾಟಗಳಲ್ಲಿ, ವೇಷಭೂಷಣಗಳ ಅಲಂಕಾರಗಳಲ್ಲಿ, ಜನಪದೀಯ ಚಿತ್ರಕಲೆಯನ್ನು ಕಾಣಬಹುದಾಗಿದೆ. ಮುಖ್ಯವಾಗಿ 'ದೊಡ್ಡಾಟ' ಅತ್ಯಂತ ಗಮನ ಸೆಳೆಯುವಂಥದು. ಕಥೆಗಳ ವಸ್ತುವಿನ ಮೇಲೆ ಈ ದೊಡ್ಡಾಟಕ್ಕೆ ಬಳಕೆಯಾಗುವ ಮುಖವರ್ಣಿಕೆ, ವೇಷಭೂಷಣಗಳನ್ನು ಅವಲೋಕಿಸ ಬೇಕಾಗುತ್ತದೆ. ದೊಡ್ಡಾಟದಲ್ಲಿ 1. ಮುಖವರ್ಣಿಕೆ, 2. ವೇಷಭೂಷಣ, ಭುಜಕಟ್ಟು, 3. ಕಿರೀಟ ಇವು ಮುಖ್ಯ ಅಲಂಕಾರ ಸಾಮಗ್ರಿಗಳು.

1. ಮುಖವರ್ಣಿಕೆ: ಮುಖವರ್ಣಿಕೆಯಲ್ಲಿ ಕೆಂಪು, ನೀಲಿ, ಕಪ್ಪು ಬಿಳಿ ಬಣ್ಣಗಳ ಬಳಕೆ ಪ್ರಮುಖವಾಗಿರುತ್ತದೆ. ಇಲ್ಲಿ ಬಣ್ಣಗಳು ನೇರವಾಗಿ ಬಳಕೆಯಾಗುವುದಿಲ್ಲ. ಕೆಂಪು, ನೀಲಿ ಬಣ್ಣಗಳಲ್ಲಿ ಬಿಳಿ ಬಣ್ಣ ಬೆರಸಿ, ತಿಳಿವರ್ಣ ತಯಾರಿಸಿಕೊಳ್ಳುವರು. ಪಾತ್ರಗಳಿಗೆ ತಕ್ಕಂತೆ ಇವನ್ನು ಮುಖದ ಮೇಲೆ ಲೇಪಿಸುತ್ತಾರೆ. ಕೃಷ್ಣನ ಪಾತ್ರವಾದರೆ ತಿಳಿನೀಲಿವರ್ಣ, ರಾಜಮಹಾರಾಜರ ಪಾತ್ರವಾದರೆ ತಿಳಿಕೆಂಪುವರ್ಣ, ರಾಕ್ಷಸಪಾತ್ರವಾದರೆ ಕಪ್ಪು, ಕೆಂಪು ಬಣ್ಣದ ದಟ್ಟ ಲೇಪನವಿರುತ್ತದೆ. ರಾಣಿಯರಂಥ ಸ್ತ್ರೀಮುಖವರ್ಣಿಕೆಯಲ್ಲಿ ಹುಬ್ಬು, ಹಣೆ ಕೆನ್ನೆಗಳಲ್ಲಿ ತಿದ್ದಿ ತೀಡಿದ ಅಲಂಕಾರವಿರುತ್ತದೆ. ಸ್ತ್ರೀ ಪಾತ್ರಕ್ಕೆ ಕೆಂಪು ಬಣ್ಣ ಬಳಕೆಯಾಗುತ್ತದೆ. ದಾಸಿ ಪಾತ್ರಗಳಿಗೆ ಕಡಿಮೆ ಪ್ರಮಾಣದ ವರ್ಣಗಾರಿಕೆ, ಅಲಂಕಾರವಿರುತ್ತದೆ.

ಯಕ್ಷಗಾನದಂತೆ ಇಲ್ಲಿಯ ಪಾತ್ರಧಾರಿಗಳು ತಾವೇ ಬಣ್ಣ ಹಚ್ಚಿಕೊಳ್ಳುವುದಿಲ್ಲ. ಮುಖಕ್ಕೆ ಬಣ್ಣ ಹಚ್ಚುವ ಬೇರೆ ಕಲಾವಿದನಿರುತ್ತಾನೆ. ಇಲ್ಲಿಯ ವರ್ಣ ವಿನ್ಯಾಸಕ್ಕೆ ಕುಂಚದ ಬಳಕೆ ತೀರ ಕಡಿಮೆ. ಮೀಸೆ, ಕಣ್ಣುಗಳ, ಹುಬ್ಬುಗಳ ವಿನ್ಯಾಸಕ್ಕೆ ಮಾತ್ರ ಸೂಕ್ಷ್ಮ ಕುಂಚದ ಕೆಲಸ ಬೇಕಾಗುತ್ತದೆ. ಇಲ್ಲದಿದ್ದರೆ ಅಂಗೈಗಳಿಂದಲೇ ಬಣ್ಣ ಲೇಪಿಸುತ್ತಾರೆ. ಹುಡಿವರ್ಣಗಳನ್ನು ಎಣ್ಣೆಯಲ್ಲಿ ಕಲಸಿ ಸಿದ್ಧಮಾಡಿಕೊಳ್ಳುತ್ತಾರೆ. ಮೊದಲು ನಿಸರ್ಗ ಸಹಜ ದೊರೆಯುವ ಕಲ್ಲು, ಮಣ್ಣು , ಗಿಡಮೂಲಿಕೆಗಳಿಂದ ವರ್ಣ ತಯಾರಿಸುತ್ತಿದ್ದರಂತೆ. ಈಗ ಪೇಟೆಯ ಹುಡಿಬಣ್ಣಗಳನ್ನೇ ಬಳಸುತ್ತಾರೆ.

2. ವೇಷಭೂಷಣ: ವೇಷಭೂಷಣಗಳಲ್ಲಿ ಉಡುಗೆ ತೊಡುಗೆಯಾಗಿ, ಕೃತಕ ಅಲಂಕಾರಕ್ಕಾಗಿ ಕೆಲವು ಪರಿಕರಗಳನ್ನು ಬಳಸುತ್ತಾರೆ. ಭುಜಕೀರ್ತಿ, ಎದೆಹಾರ, ಎದೆಕಟ್ಟು, ರಟ್ಟೆ, ಕಟ್ಟು, ಮುಂಗೈ ಕಟ್ಟು, ಮಣಿಕಟ್ಟು, ಕೈಕಟ್ಟು, ಕರ್ಣಕುಂಡಲ ಇತ್ಯಾದಿಗಳಲ್ಲಿ ವರ್ಣವೈವಿಧ್ಯತೆಯನ್ನು ಕಾಣುತ್ತೇವೆ. ಸ್ತ್ರೀ ಪಾತ್ರಗಳಲ್ಲಿ ಭುಜಕೀರ್ತಿ ಹಾಗೂ ಎದೆಹಾರವಿರುವುದಿಲ್ಲ. ಬದಲಿಗೆ ಕೈಕಡಗ, ಜಡೆಬಿಲ್ಲೆ, ತುರುಬು, ನಾಗರಜಡೆಗಳಿರುತ್ತವೆ.

3. ಕಿರೀಟ : ಸ್ತ್ರೀ ಹಾಗೂ ಪುರುಷ ಪಾತ್ರಗಳಿಗೆ ಸಂಬಂಧಿಸಿ ಕಿರೀಟ ಬಳಸುತ್ತಾರೆ. ಪುರುಷ ಕಿರೀಟ, ಸ್ತ್ರೀಯರಿಗಿಂತ ದೊಡ್ಡದಿರುತ್ತದೆ. ಎರಡರಲ್ಲಿಯೂ ಅಲಂಕಾರ ವಿಶೇಷತೆಯು ನೋಡಲು ಸಿಗುತ್ತದೆ. ಪುರುಷರ ಕಿರೀಟದಲ್ಲಿ 1) ಬಟ್ಟಲ ಕಿರೀಟ, 2) ಜುಟಗಾರಿ ಕಿರೀಟ, 3) ಕಳಸ ಕಿರೀಟ, 4) ಗಜ ಕಿರೀಟ, 5) ಮಯೂರ ಕಿರೀಟ, 6) ಹುಲಿ ಕಿರೀಟ, 7) ಸರ್ಪಕಿರೀಟ ಎಂಬ ವೈವಿಧ್ಯಮಯ ಕಿರೀಟಗಳಿದ್ದರೆ, ಸ್ತ್ರೀಯರ ಕಿರೀಟಗಳಲ್ಲಿ 1) ಮಣಿ ಕಿರೀಟ, 2) ಸಿರಿಪೇಚ ಕಿರೀಟ, 3) ನರಸುತ್ತ ಕಿರೀಟವೆಂಬ ಅಲಂಕೃತ ಕಿರೀಟಗಳಿರುತ್ತವೆ.

ಪಾತ್ರಗಳ ಘನತೆಗೆ ತಕ್ಕಂತೆ ಈ ಕಿರೀಟಗಳು ರಚನೆಗೊಂಡಿರುತ್ತವೆ. ಧೀರೋದಾತ್ತ ಸಾಹಸ ಪ್ರಧಾನ ಪಾತ್ರಗಳಿಗೆ ಗಜದ ಸೊಂಡಿಲ ವಿನ್ಯಾಸದ ರಾಜಕಿರೀಟ, ಹುಲಿಕಿರೀಟ, ದೇವತೆ ಪಾತ್ರಗಳಿಗೆ ಮಯೂರ ಕಿರೀಟ; ರಾಕ್ಷಸಾದಿ ಉಗ್ರಪಾತ್ರಗಳಿಗೆ ಸರ್ಪಕಿರೀಟಗಳಿರುತ್ತವೆ. ಜೀರಿಂಬೆ ರೆಕ್ಕೆ, ಗಾಜಿನ ಚೂರು, ವಿವಿಧ ಬಣ್ಣದ ಬ್ಯಾಗಡಿಚೂರು, ಮಣಿ ಇತ್ಯಾದಿಗಳನ್ನು ಅಂಟಿಸಿ, ಮಂದಬೆಳಕಿನಲ್ಲಿ ಅದು ಹೊಳೆಯುವಂತೆ ವಿನ್ಯಾಸ ಮಾಡಿರುತ್ತಾರೆ.

## 2. ಧರ್ಮಮೂಲ ಜನಪದ ಚಿತ್ರಕಲೆ

ಧಾರ್ಮಿಕ ಹಿನ್ನೆಲೆಯ ದೈವೀ ಪರಿಕಲ್ಪನೆ ಮತ್ತು ಆರಾಧನಾ ಸಂದರ್ಭಗಳು ಸಹ ಜನಪದ ಚಿತ್ರಕಲೆಯ ಹುಟ್ಟಿಗೆ ಕಾರಣವಾಗಿವೆ. ಜನಪದರು ದೇವರ ಬಗೆಗೆ ಕುರಿತು ಮಾಡಿದ ಚಿಂತನ-ಮಂಥನಗಳು ಜನಪದ ಸಾಹಿತ್ಯಕ್ಕೆ ಮೂಲವಾಗಿರುವಂತೆ ದೇವರ ಮುಂದೆ ಹಾಡಿದ ಹಾಡು, ಕುಣಿತಗಳು ಜನಪದ ನೃತ್ಯ-ಸಂಗೀತಗಳಿಗೆ ಮೂಲವಾಗಿವೆ. ಹಾಗೆಯೇ ಈ ದೇವರುಗಳಿಗೆ ಮಾಡಿದ ಅಲಂಕಾರಿಕೆಯ ಚಿತ್ರ ವಿನ್ಯಾಸಗಳು ಈ ಆರಾಧನಾ ಸಂಪ್ರದಾಯದ ಹಿನ್ನೆಲೆಯಲ್ಲಿ ಹುಟ್ಟಿಕೊಂಡ ಚಿತ್ರಗಾರಿಕೆಗಳು ಹಬ್ಬ

ಹುಣ್ಣಿಮೆಯಂತಹ, ಮದುವೆ-ಜಾತ್ರೆಗಳಂತಹ ಸಂದರ್ಭದಲ್ಲಿಯೂ ಪ್ರಕಟವಾಗಿರುವುದನ್ನು ಕಾಣುತ್ತೇವೆ.

ಹಬ್ಬ, ಜಾತ್ರೆ, ಉತ್ಸವ, ಮದುವೆಗಳಲ್ಲಿ ಚಿತ್ರಿಸುವ ಚಿತ್ರಗಳು ಧರ್ಮದ ಕ್ರಿಯಾ ವಿಧಿಗಳು ಒಂದೊಂದು ರೀತಿಯ ನಂಬಿಕೆಗಳಿಂದ ಪ್ರಕಟಗೊಳ್ಳುತ್ತವೆ. ಹೀಗೆ ಜನಪದ ಆಶಯಗಳ ನಂಬಿಕೆಗಳಿಂದ ಅಭಿವ್ಯಕ್ತಗೊಳ್ಳುವ ಈ ಚಿತ್ರಕಲೆಯನ್ನು ಧರ್ಮಮೂಲ ಜನಪದ ಚಿತ್ರಕಲೆಯೆಂದು ಕರೆಯಬಹುದಾಗಿದೆ.

ಧರ್ಮಮೂಲ ಜನಪದ ಚಿತ್ರಕಲೆಯೂ ಎರಡು ರೀತಿಯಲ್ಲಿ ಕವಲೊಡೆದಿರುವುದನ್ನು ಕಾಣುತ್ತೇವೆ. 1. ಧಾರ್ಮಿಕ ಹಿನ್ನೆಲೆಯ ಜನಪದ ಚಿತ್ರಕಲೆ 2. ತಾಂತ್ರಿಕ ಹಿನ್ನೆಲೆಯ ಜನಪದ ಚಿತ್ರಕಲೆ.

1. ಧಾರ್ಮಿಕ ಹಿನ್ನೆಲೆಯ ಜನಪದ ಚಿತ್ರಕಲೆ: ಧಾರ್ಮಿಕ ಹಿನ್ನೆಲೆಯಲ್ಲಿ ಮೂಡಿಬಂದ ಕರ್ನಾಟಕದ ಜನಪದ ಚಿತ್ರಕಲೆಯು ಧಾರ್ಮಿಕ ರೀತಿಯ ಮತಾಚಾರಣೆಗಳು ಬೆಳೆದ ಹಾಗೆಲ್ಲ ಅವುಗಳ ಜೊತೆಯಲ್ಲಿಯೇ ಜನಪದ ಚಿತ್ರಕಲೆಗಳು ಪೋಷಿತಗೊಂಡು ಬೆಳವಣಿಗೆಯಾಗಿವೆ.

ಧಾರ್ಮಿಕ ಹಿನ್ನೆಲೆಯ ಈ ಜನಪದ ಚಿತ್ರಕಲೆಯಲ್ಲಿ ನಾಲ್ಕು ರೀತಿಯಲ್ಲಿ ವಿಂಗಡಿಸಿ ಅಭ್ಯಾಸ ಮಾಡಬಹುದು. 1. ಹಬ್ಬ ಹರಿದಿನಗಳಲ್ಲಿ ಚಿತ್ರಿಸುವ ಚಿತ್ರವಿನ್ಯಾಸಗಳು, 2. ದೇವರ ಉತ್ಸವ, ಜಾತ್ರೆಗಳಲ್ಲಿ ಚಿತ್ರಿಸುವ ಚಿತ್ರ ವಿನ್ಯಾಸಗಳು, 3. ಮದುವೆ, ಮುಂಜಿಗಳಲ್ಲಿ ಚಿತ್ರಿಸುವ ಚಿತ್ರವಿನ್ಯಾಸಗಳು, 4. ಸಂಕೀರ್ಣ ರೀತಿಯ ಚಿತ್ರವಿನ್ಯಾಸಗಳು.

1. ಹಬ್ಬಹರಿದಿನಗಳಲ್ಲಿ ಚಿತ್ರಿಸುವ ಜನಪದ ಚಿತ್ರವಿನ್ಯಾಸಗಳು : ಯಾವುದೇ ಹಬ್ಬ-ಹರಿದಿನಗಳಿರಲಿ ಆಗ ನೆಲಗೋಡೆಗಳು ಸಾರಣೆಗೊಂಡು ಅಲ್ಲಿ ವಿಶೇಷವಾದ ಚಿತ್ರವಿನ್ಯಾಸದ ಅಲಂಕಾರಗಳು ಮೂಡಿಬರುವುದು ಸಾಮಾನ್ಯವಾದ ಒಂದು ಕ್ರಮವಾಗಿದೆ. ಇಲ್ಲಿ ಸುಣ್ಣ ಹುರುಮಂಜಿನ ಜೋರುಬೀಡುವುದು, ಚುಕ್ಕೆಗಳನ್ನು ಇಡುವುದು, ಅಧಿಕ ಸ್ವಸ್ತಿಕ ಮುಂತಾದ ಚಿತ್ರಗಳನ್ನು ಬರೆಯುವುದು, ಪಾಂಡವ-ಕೌರವರ ಚಿತ್ರ ಬಿಡಿಸಿರುವುದು ಬಾಗಿಲಿನ ಸುತ್ತಲ ಸುಳುವು ನಕ್ಷೆಗಳನ್ನು ಚಿತ್ರಿಸುವುದನ್ನು ಕಾಣುತ್ತೇವೆ. ಬಣ್ಣದ ಪಟ್ಟಿಗೆಳನ್ನು ಎಳೆಯುವುದು, ಗೂಡು ಮಾಡುಗಳ ಅಲಂಕಾರ, ಜಂತಿಯ ತೊಲೆಗಳಿಗೆ ಹಸ್ತದ ಚಿತ್ರ ಬಿಡಿಸುವುದು ಗೃಹಪ್ರವೇಶದ ಸಂದರ್ಭದ ಚಿತ್ರಗಳು ಗಮನಾರ್ಹವಾಗಿವೆ. ಇಲ್ಲಿ ವೈವಿಧ್ಯಮಯವಾದ ಜನಪದರ ಕಲ್ಪನಾ ಶ್ರೀಮಂತಿಕೆ ಅಭಿವ್ಯಕ್ತಿಯಾಗಿರುವುದನ್ನು ಗುರುತಿಸಬಹುದು. ಇನ್ನು ಹಬ್ಬಗಳಲ್ಲಿ ವಿಶಿಷ್ಟವಾಗಿ ಬಿಡಿಸುವ ಚಿತ್ರಗಳಂತೂ ಅನಂತ. ಮಾದರಿಗಾಗಿ ಹೆಸರಿಸುವುದಾದರೆ, ಗುಡಿಹುಣ್ಣಿಮೆ ಅಥವಾ ಬೆಳದಿಂಗಳಪ್ಪನ ಪೂಜೆಯ ಚಿತ್ರಗಳು ಸೀಗಿಹುಣ್ಣಿಮೆಯಲ್ಲಿ ಬಿಡಿಸುವ ಚಿತ್ರಗಳು. ಗೌರಿ ಹುಣ್ಣಿಮೆಯಲ್ಲಿ ಗೌರಿಚಿತ್ರ ಬರೆಯುವುದು. ಅಷ್ಟಮಿಯಲ್ಲಿ ಕೊಡದ ಚಿತ್ರ ಬರೆಯುವುದು, ಮಣ್ಣೆತ್ತಿನ ಅಮಾವಾಸ್ಯೆಯಲ್ಲಿ ಮೂರ್ತಿಗೆ ಬಣ್ಣದ ಅಲಂಕಾರ ಮಾಡುವುದು, ನಾಗರ ಪಂಚಮಿಯಲ್ಲಿ ನಾಗಪ್ಪನ ಮೂರ್ತಿಗೆ ವರ್ಣಾಲಂಕಾರ ಮಾಡುವುದು, ದೀಪಾವಳಿ ಹಬ್ಬದ ಪಾಂಡವರ ಹೆಜ್ಜೆಯ

ಚಿತ್ರ ಬಿಡಿಸುವುದು. ಹೀಗೆ ಪ್ರಾದೇಶಿಕವಾಗಿ ಬೇರೆ ಹಬ್ಬಗಳಲ್ಲಿ ಆಯಾ ಪ್ರದೇಶದ ಜನ ವರ್ಣರಂಜಿತವಾಗಿ ಈ ಕಲೆಯನ್ನು ಬೆಳೆಸಿಕೊಂಡು ಬಂದಿದ್ದಾರೆ.

2. ದೇವರ ಉತ್ಸವ ಜಾತ್ರೆಗಳಲ್ಲಿ ಚಿತ್ರಿಸುವ ಜನಪದ ಚಿತ್ರ ವಿನ್ಯಾಸಗಳು: ಗ್ರಾಮದೇವರ ದೇವತಾ ಕಾರ್ಯಗಳು ವ್ಯಕ್ತಿಗೆ ಸೀಮಿತವಾಗಿರದೆ, ಸಾಮೂಹಿಕವಾಗಿ ಜರುಗುತ್ತವೆ. ಪ್ರತಿಯೊಂದು ಊರಿನಲ್ಲಿಯೂ ಗ್ರಾಮದೇವತೆಗಳಿದ್ದು, ಅವು ಚಿತ್ರಕಲೆಯ ದೃಷ್ಟಿಯಿಂದಲೂ ಮಹತ್ವದವುಗಳಾಗಿವೆ. ಇಲ್ಲಿ ಮೂರು ರೀತಿಯಲ್ಲಿ ಚಿತ್ರಾಲಂಕಾರವನ್ನು ಕಾಣಬಹುದು. ಅ) ದೇವಸ್ಥಾನ ಅಲಂಕರಣ, ಆ) ದೇವರ ಅಲಂಕರಣ, ಇ) ಉತ್ಸವ ತೇರಿನ ಅಲಂಕರಣಗಳಲ್ಲಿ ವಿಶೇಷವಾಗಿ ಕಂಡುಬರುತ್ತದೆ. ಶ್ರೀ ಸ್ವಸ್ತಿಕದಂತಹ ಸಂಕೇತಗಳು, ಛತ್ರಿಚಾಮರಗಳಲ್ಲಿ ಪಲ್ಲಕ್ಕಿಗಳಲ್ಲಿರುವ ವರ್ಣಚಿತ್ರಗಾರಿಕೆ ಅಭ್ಯಾಸಯೋಗ್ಯವಾಗಿರುವಂತಹುದು. ಅನೇಕ ಸ್ತ್ರೀ ಗ್ರಾಮದೇವತೆಗಳ ವರ್ಣಾಲಂಕಾರಗಳಲ್ಲಿ ಜನಪದರ ಬಣ್ಣದ ವೈಭವವನ್ನು ಗುರುತಿಸಬಹುದು. ಪುರುಷ ದೇವತೆಗಳಲ್ಲಿಯೂ ಈ ಕಲೆ ವಿಸ್ತರಿಸಿಕೊಂಡಿದೆ. ಮುಖವಾಡಗಳು ಅದ್ಭುತ ವರ್ಣವಿನ್ಯಾಸಗಳಿಂದ ಕೂಡಿವೆ. ಭೂತಾರಾಧನೆ, ನಾಗಮಂಡಲ, ಸೋಮನಕುಣಿತ, ಅಮೋಘಸಿದ್ಧನ ಮುಖವಾಡಗಳು ಮುಂತಾದುವುಗಳನ್ನು ಹೆಸರಿಸಬಹುದಾಗಿದೆ.

3. ಮದುವೆ ಮುಂಜಿಗಳಲ್ಲಿ ಚಿತ್ರಿಸುವ ಜನಪದ ಚಿತ್ರವಿನ್ಯಾಸಗಳು : ಮದುವೆಯಂದು ಮದುಮಕ್ಕಳು ಕುಳಿತುಕೊಳ್ಳುವ ಸ್ಥಳದ ಹಿಂದೆ ಗೋಡೆಯ ಮೇಲೆ ವಿವಿಧ ರೀತಿಯ ಚಿತ್ರಗಳನ್ನು ಚಿತ್ರಿಸುತ್ತಾರೆ. ಈಶ್ವರಿ, ಸೂರ್ಯಚಂದ್ರ, ಬಾಸಿಂಗ, ಸ್ವಸ್ತಿಕ್, ಓಂ, ಶುಭ, ಲಾಭ, ಭೋಜಗಲಿ, ಮುಂತಾದ ಚಿತ್ರಗಳು ಒಂದೊಂದು ಜನಾಂಗದಲ್ಲಿ ವೈವಿಧ್ಯತೆಗಳಿಂದ ಕೂಡಿದವುಗಳಾಗಿರುತ್ತವೆ.

4. ಸಂಕೀರ್ಣ ರೀತಿಯ ಜನಪದ ಚಿತ್ರವಿನ್ಯಾಸಗಳು : ಜನಪದರ ಚಿತ್ರಕಲಾ ವಿನ್ಯಾಸಗಳ ಹರವು ತುಂಬಾ ವ್ಯಾಪಕವಾದುದು, ಕೆಲವು ವಿಶಿಷ್ಟ ಮತ್ತು ಹಲವಾರು ಸಂದರ್ಭಗಳಲ್ಲಿ ಪುನರಾವೃತ್ತಿಯಾಗುವ ಚಿತ್ರಗಾರಿಕೆಯನ್ನು ಇಲ್ಲಿ ಅನುಕೂಲತೆಯ ದೃಷ್ಟಿಯಿಂದ ಸಂಕೀರ್ಣ ರೀತಿಯ ಚಿತ್ರಗಾರಿಕೆಯೆಂದು ಕರೆದು ಅಭ್ಯಸಿಸಬಹುದಾಗಿದೆ. ಮಾದರಿಗಾಗಿ ಹಾಲಕ್ಕಿಗಳು ಬಿಡಿಸುವ ಹಲಿ ಚಿತ್ರಗಳು, ಜಗಲಿ ಗದ್ದಿಗೆಯ ಮೇಲೆ ಚಿತ್ರಿಸುವ ವಿನ್ಯಾಸಗಳು, ತುಳಸಿಕಟ್ಟೆ ಮುಂತಾದ ಸಂದರ್ಭದಲ್ಲಿಯ ಚಿತ್ರಗಳನ್ನು ಹೆಸರಿಸಬಹುದಾಗಿದೆ.

ಹಾಲಕ್ಕಿ ಜನಾಂಗದ ಹರಿಚಿತ್ರಗಳು: ಉತ್ತರ ಕನ್ನಡ ಜಿಲ್ಲೆಯಲ್ಲಿ ನೆಲೆನಿಂತ ಹಾಲಕ್ಕಿ ಜನಾಂಗದವರದ್ದು ಒಂದು ವಿಶಿಷ್ಟ ಬದುಕು. 'ತಮ್ಮ ಬದುಕಿನ ಸಂತೋಷವನ್ನು ಹಾಲಕ್ಕಿ ಸ್ತ್ರೀಯರು ಈ ಹಲಿಚಿತ್ರಗಳಲ್ಲಿ ಮೂಡಿಸುತ್ತಾರೆ. ಇವರು ಹಬ್ಬ-ಹರಿದಿನ, ಉತ್ಸವ, ಜಾತ್ರೆ, ಮದುವೆಯಂತಹ ಸಂತೋಷದ ಸಮಯದಲ್ಲಿ ತಮ್ಮ ಕಲ್ಪನಾ ಶ್ರೀಮಂತಿಕೆಯಿಂದ ವಿವಿಧ ರೀತಿಯ ಚಿತ್ರಗಳನ್ನು ನೆಲಗೋಡೆಯ ಮೇಲೆಲ್ಲಾ ಚಿತ್ರಿಸುತ್ತಾರೆ. ಬಿಳಿಜೇಡಿಮಣ್ಣಿನಿಂದ ರೇಖಾಚಿತ್ರಗಳನ್ನು ಬರೆಯುತ್ತಾರೆ. ಇನ್ನು ಕೆಲವು ಸಲ ಗೋಣ್ಣೆಯೆಂಬ ಗೆಣಸಿನ ಜಾತಿಯ ಬಳ್ಳಿಯ ಎಲೆಗಳನ್ನು ಶಿಂಡ್ಲಬಳ್ಳಿಯ ಎಲೆಗಳನ್ನು ತಿಕ್ಕಿ ಶೇಡಿಗೆ (ಜೇಡಿಮಣ್ಣಿಗೆ) ಸೇರಿಸಿ ಈ ರಸದಿಂದ 'ಹಲಿ' ಚಿತ್ರ ಬರೆಯುತ್ತಾರೆ..

ಚಿತ್ರಗಳು ಸಾಮಾನ್ಯವಾಗಿ ವರ್ಣರಂಜಿತವಾದವುಗಳಲ್ಲದಿದ್ದರೂ ಬಿಳಿ ಮತ್ತು ಕಂದು ಬಣ್ಣದ ರೀತಿಯವು ನೆಲವನ್ನು ಸಾರಿಸಿ ಕೆಂಪುಬಣ್ಣದ ಜಾಜುಗಲ್ಲನ್ನು ನೀರಿನಲ್ಲಿ ತೇಯ್ದು ಸಾರಿಸಿದ ಜಾಗದಲ್ಲೆ ಲೇಪಿಸಿ ಅದರ ಮೇಲೆ ಸಿದ್ಧಮಾಡಿಕೊಂಡ ದ್ರವದಿಂದ ಹಲಿಯ ಚಿತ್ರಗಳನ್ನು ಬರೆಯುತ್ತಾರೆ. ಚಿತ್ರಗಳ ವಸ್ತುವಿನ್ಯಾಸ: ಸಾಮಾನ್ಯವಾಗಿ ಜಾಮಿತೀಯ ಆಕೃತಿ, ಗಿಡಬಳ್ಳಿ, ಹಕ್ಕಿ ಗುಮ್ಮಟ, ತಾಳ ತುಳಸಿಗಿಡ, ಕಟ್ಟೆ ತೆಂಗಿನಕಾಯಿ ಗೊನೆಯ ಚಿತ್ರವನ್ನು, ಧಾನ್ಯದ ತೆನೆಗಳ ಆಕಾರದಲ್ಲಿ ಹಲಿಗಳನ್ನು ಬರೆಯುತ್ತಾರೆ. ತಮ್ಮ ಪರಿಸರದ ಬದುಕಿನ ವಿಷಯಗಳಲ್ಲಿ ಈ ಚಿತ್ರಗಳಲ್ಲಿ ಸಮಾರಂಭದಲ್ಲಿ ಬಿಡಿಸುವ ಹಲಿಚಿತ್ರಗಳು, ಮದುವೆ ಹಬ್ಬ, ಉತ್ಸವದಲ್ಲಿ ಬಿಡಿಸುವ ಚಿತ್ರಗಳು, ದಿನಂಪ್ರತಿ ಬಿಡಿಸುವ ಹಲಿಚಿತ್ರಗಳಲ್ಲಿ ವ್ಯತ್ಯಾಸಗಳಿವೆ. ಇಲ್ಲೆಲ್ಲ ವೈವಿಧ್ಯಮಯವಾದ ಚಿತ್ರವಿನ್ಯಾಸಗಳಿರುವುದನ್ನು ಕಾಣುತ್ತೇವೆ.

3. ತಾಂತ್ರಿಕ ಹಿನ್ನೆಲೆಯ ಜನಪದ ಚಿತ್ರಕಲೆ: ಧರ್ಮಮೂಲ ಜನಪದ ಚಿತ್ರಕಲೆಯ ಇನ್ನೊಂದು ಅಂಗವಾಗಿ ತಾಂತ್ರಿಕ ಹಿನ್ನೆಲೆಯ ಜನಪದ ಚಿತ್ರಕಲೆ ಬೆಳವಣಿಗೆ ಹೊಂದಿರುವುದನ್ನು ಗುರುತಿಸಬಹುದು. ಇದರಲ್ಲಿ ಎರಡು ಉಪಪ್ರಕಾರಗಳನ್ನು ಮಾಡಿ ಅಭ್ಯಾಸ ಮಾಡಬಹುದಾಗಿದೆ. 1) ರಂಗೋಲಿ ಚಿತ್ರಕಲೆ, 2) ರಂಗೋಲಿಯೇತರ ಚಿತ್ರಕಲೆ.

1) ರಂಗೋಲಿ ಚಿತ್ರಕಲೆ: ರಂಗೋಲಿ ಭಾರತದ ಅತ್ಯಂತ ಪ್ರಾಚೀನ ಜನಪದ ಕಲೆ. ಬದುಕಿನ ಪ್ರಸನ್ನತೆಯನ್ನು ಹೇಳುವ ಲಾಲಿತ್ಯಪೂರ್ಣ ಕಲಾಕೌಶಲ್ಯವೇ ರಂಗವಲ್ಲಿ. ಇದು ಅಲಂಕಾರಿಕ ಮಾತ್ರವಲ್ಲ ಮಂಗಲಕರವೂ ಆಗಿದೆ. ಇದು ಭಾರತದ ಹಳ್ಳಿ ಹಳ್ಳಿಗಳಲ್ಲಿ ತುಂಬಿರುವ ಸೌಂದರ್ಯಪ್ರಜ್ಞೆಯ ದ್ಯೋತಕ. 'ರಂಗ' ಎಂದರೆ ಬಣ್ಣ; 'ವಲ್ಲಿ' ಎಂದರೆ ಬಳ್ಳಿ, ಬಣ್ಣದ ಸಾಲು, ರಂಗೋಲಿ ಪುಟಿ, ಬಣ್ಣಗಳಿಂದ ರಚಿಸಿದ ಬಳ್ಳಿಯ ಚಿತ್ರವೇ ರಂಗೋಲಿ ಎನ್ನಬಹುದು. ಬಣ್ಣದಗೆರೆಗಳ ಕಲಾತ್ಮಕ ಸಮೂಹವೇ ರಂಗೋಲಿಯಾಗಿದೆ. ಮಾನವ ಬದುಕಿನಲ್ಲಿ ಚಿತ್ರಕಲೆಯ ಪ್ರವೇಶದೊಂದಿಗೆ ರಂಗೋಲಿಯು ಪ್ರವೇಶ ಪಡೆದಿದೆ.

ರಂಗೋಲಿಯನ್ನು ಎರಡು ವಿಧದಿಂದ ಹಾಕುವುದುಂಟು. ಒಂದು ಚುಕ್ಕೆಯ ರಂಗೋಲಿ. ಚುಕ್ಕೆಗಳನ್ನು ಇಟ್ಟು ಆ ಚುಕ್ಕೆಗಳಿಗೆ ಗೆರೆಗಳನ್ನು ಕೂಡಿಸುತ್ತ ಅಪೇಕ್ಷಿತ ಚಿತ್ರಕೃತಿಗಳನ್ನು ರಚಿಸುವುದು. ಇನ್ನೊಂದು ಚುಕ್ಕೆರಹಿತ ರಂಗೋಲಿ, ಇದನ್ನು ಸರಳಗೈ ರಂಗೋಲಿ, ಬಳ್ಳಿರಂಗೋಲಿ ಎಂದು ಕರೆಯುತ್ತಾರೆ. ಇದರಲ್ಲಿ ಚುಕ್ಕೆಗಳನ್ನು ಇಡದೆ ನೇರವಾಗಿ ಬಳ್ಳಿ, ಎಲೆ, ಹೂ, ಗಿಡ, ಪಕ್ಷಿ ಇತ್ಯಾದಿ ರೀತಿಯ ಚಿತ್ರ ವಿನ್ಯಾಸಗಳನ್ನು ರಚಿಸುತ್ತಾರೆ. ಇದು ಹೆಚ್ಚಾಗಿ ಸ್ತ್ರೀಪ್ರಧಾನವಾದ ಕಲೆಯಾಗಿದೆ. ರಂಗೋಲಿಯಲ್ಲಿ ಮೂರು ಪ್ರಕಾರಗಳನ್ನು ಮಾಡಿ ಅಧ್ಯಯನ ಮಾಡಬಹುದು: ಅ) ಉತ್ಸವದ ರಂಗೋಲಿ, ಆ) ಉತ್ಸಾಹದ ರಂಗೋಲಿ, ಇ) ಸಂಕೀರ್ಣ ರಂಗೋಲಿಗಳೆಂದು.

ಅ) ಉತ್ಸವದ ರಂಗೋಲಿ: ನಿರ್ದಿಷ್ಟ ದಿನ, ವಾರ ತಿಂಗಳು ಹಬ್ಬ - ಹರಿದಿನ, ಮದುವೆ, ಮುಂಜಿ ಜಾತ್ರೆಗಳಂತಹ ಸಂದರ್ಭದಲ್ಲಿ ಹಾಕುವ ರಂಗೋಲಿಗಳನ್ನು ಉತ್ಸವದ

ರಂಗೋಲಿಗಳೆಂದು ಕರೆಯಬಹುದು. ಇಲ್ಲಿ ಧಾರ್ಮಿಕತೆ ಮತ್ತು ಅಲಂಕಾರಿಕತೆಗಳೆರಡೂ ಇರುತ್ತವೆ. ನಿತ್ಯದ ರಂಗೋಲಿ, ನಿರ್ದಿಷ್ಟವಾರದ ರಂಗೋಲಿ, ತಿಂಗಳ ರಂಗೋಲಿ, ಚಾತುರ್ಮಾಸದ ರಂಗೋಲಿ, ದೀಕ್ಷಾ ಸಂದರ್ಭದ ರಂಗೋಲಿ, ದೇವರ ಮುಂದೆ ಹಾಕುವ ರಂಗೋಲಿ, ಹಬ್ಬದ ರಂಗೋಲಿ, ಮದುವೆಯ ರಂಗೋಲಿಗಳು ತುಂಬಾ ಪ್ರಸಿದ್ಧವಾದವುಗಳಾಗಿವೆ.

ಆ) ಉತ್ಸಾಹದ ರಂಗೋಲಿ : ಉತ್ಸಾಹದ ರಂಗೋಲಿಗಳದು ಇನ್ನೊಂದು ರೀತಿಯ ಅಭಿವ್ಯಕ್ತಿ. ಸೌಂದರ್ಯದ ಸೃಷ್ಟಿಕ್ರಿಯೆ ಉತ್ಸಾಹದ ರಂಗೋಲಿಯಲ್ಲಿ ಹೆಚ್ಚಾಗಿರುತ್ತದೆ. ಇಲ್ಲಿ, ಹೂವಿನ ರಂಗೋಲಿ, ಧಾನ್ಯಗಳ ರಂಗೋಲಿ, ಆರತಿ ತಟ್ಟೆಯ ರಂಗೋಲಿ, ಊಟದ ತಟ್ಟೆಯ ರಂಗೋಲಿ, ಸುಗ್ಗಿಯ ರಂಗೋಲಿ, ನೀರಿನ ರಂಗೋಲಿ, ಶೇಡಿಯ ರಂಗೋಲಿ, ಜಾತ್ರೆಯ ರಂಗೋಲಿ ಪ್ರಮುಖವಾಗಿವೆ. ಜನಪದರು ತಮ್ಮ ಸುತ್ತಮುತ್ತಲು ಸಿಗುವ ಧವಸಧಾನ್ಯ, ಹೂಬಳ್ಳಿ, ಎಲೆ, ಹಣ್ಣುಕಾಯಿ, ಮೊದಲಾದ ವಸ್ತುಗಳನ್ನು ರಂಗೋಲಿಯಲ್ಲಿ ಬಳಸುತ್ತಾರೆ.

ಇ) ಸಂಕೀರ್ಣ ರಂಗೋಲಿ : ತಾಂತ್ರಿಕ ಹಿನ್ನೆಲೆಯ ಈ ರಂಗೋಲಿಯೂ ಉತ್ಸವ ಮತ್ತು ಉತ್ಸಾಹದ ಪ್ರಸಂಗದ ರಂಗೋಲಿಗಳಲ್ಲಿ ಬರುತ್ತದೆ. ಈ ಸಂಕೀರ್ಣ ರಂಗೋಲಿಯಲ್ಲಿ, ಪಂಚವರ್ಣದ ರಂಗೋಲಿ, ಯಜ್ಞದ ರಂಗೋಲಿ, ನವಗ್ರಹ ಶಾಂತಿಯ ರಂಗೋಲಿ, ವ್ಯಾಧಿನಿವಾರಣೆಯ ರಂಗೋಲಿ, ಗೃಹಶಾಂತಿಯ ರಂಗೋಲಿ, ಭೂತಬಿಡಿಸುವ ರಂಗೋಲಿ, ಚಾಡಿಯ ರಂಗೋಲಿ, ಮೋಡಿಯ ರಂಗೋಲಿ, ಸ್ಮಶಾನದ ರಂಗೋಲಿ, ಬಾಣಂತಿ ಕೈ ತರುವ ರಂಗೋಲಿ ಇತ್ಯಾದಿಗಳು ಪ್ರಮುಖವಾಗಿವೆ.

## 3 ವೃತ್ತಿಮೂಲ ಜನಪದ ಚಿತ್ರಕಲೆ

ಕೃಷಿಯನ್ನೇ ಮೂಲ ಉದ್ಯೋಗವನ್ನಾಗಿ ಮಾಡಿಕೊಂಡ ಜನಪದರು ತಮ್ಮ ವ್ಯವಸಾಯದ ಉಪಕರಣಗಳಲ್ಲಿ ನಿತ್ಯದ ಬದುಕಿನಲ್ಲಿ ಸೌಂದರ್ಯವನ್ನು ಕಾಣಬಯಸಿದ ಪರಿಣಾಮವಾಗಿ ಅವರ ದೈನಂದಿನ ಚಟುವಟಿಕೆಗಳಲ್ಲಿ ವೃತ್ತಿಮೂಲದ ವಸ್ತುಗಳಲ್ಲಿ ಕಲಾತ್ಮಕ ಅಂಶಗಳು ಬಳಕೆಗೊಂಡವು. ಹೀಗೆ ಜನಪದ ವೃತ್ತಿಯಲ್ಲಿ ಪ್ರವೇಶವಾದ ಅವರ ಈ ಚಿತ್ರಕಲೆಯನ್ನು ವೃತ್ತಿಮೂಲ ಜನಪದ ಚಿತ್ರಕಲೆಯೆಂದು ಕರೆಯಬಹುದು.

ಕೃಷಿ ಪ್ರಧಾನ ವಸ್ತುವಿನಲ್ಲಿ ಚಿತ್ರ ವಿನ್ಯಾಸ : ಅಂದರೆ ಸಾಮಾನ್ಯವಾಗಿ ಉಳುವ, ಅಗೆಯುವ, ಬಿತ್ತುವ, ರಾಶಿ ಮಾಡುವ, ಕತ್ತರಿಸುವ, ಅಳತೆ ಮಾಡುವ, ಕಟ್ಟುವ ಕೊಯ್ಯುವ ಸಾಧನೋಪಕರಣಗಳು ಇತ್ಯಾದಿ.

ಕೃಷಿಯೇತರ ಗೃಹೋಪಕರಣಗಳು: ಬಡಿಗರು ಮಾಡುವ ತೊಟ್ಟಿಲು, ಮಂಚ, ತೂಗುಮಣೆ, ಒನಕೆ, ಅಡ್ಡಣಗಿ, ಈಳಿಗೆ, ಹೋಳಿಗೆಮಣೆ, ಲಟ್ಟಣಗಿ, ಕೊಣಮಿಗೆ ಕುಡಗೋಲು, ಮುಂತಾದವುಗಳು. ಕುಂಬಾರರು ಮಾಡುವ ಗಾಡಿಗೆ, ಕುಡಿಕೆ, ತತ್ರಾಣಿ, ಬಿಂದಿಗೆ, ಹರವಿಗಳಿಗೆ ಮಾಡುವ ಸುಳುವು ರೇಖಾ ವಿನ್ಯಾಸಗಳು ಇದೇ ರೀತಿ

ಕಂಚುಗಾರರು, ಒಡ್ಡರು, ಅಕ್ಕಸಾಲಿಗರು, ಚಮ್ಮಾರರು, ಜಿನಗಾರರು ನಿರ್ಮಿಸುವ ವಸ್ತುಗಳಲ್ಲಿಯ ಕಲಾವಿನ್ಯಾಸ ಇತ್ಯಾದಿಯಾಗಿ ಬರುತ್ತವೆ.

ವೃತ್ತಿಯಲ್ಲಿ ಕಲೆಯ ಆರೋಪ: ಕಲೆಯನ್ನು ವೃತ್ತಿಯನ್ನಾಗಿಸಿಕೊಂಡು ಉಪಜೀವನ ನಡೆಯಿಸುವ ರೀತಿ ಇನ್ನೊಂದು ಬಗೆಯದು. ಇದರಲ್ಲಿ:

1. ಚಿತ್ರಕಲೆ ರೂಪಿಸುವ ವೃತ್ತಿಯವರು

2. ರೂಪಿಸಿದ ಚಿತ್ರಗಳಿಂದ ಬದುಕುವ ವೃತ್ತಿಯವರು

3. ಸಂಕೀರ್ಣ ವೃತ್ತಿಯವರು

1. ಚಿತ್ರಕಲೆ ರೂಪಿಸುವ ವೃತ್ತಿಯವರು: ಜನಪದ ವೃತ್ತಿಗಳಂತೆ ಜನಪದರು ಚಿತ್ರ ಸೃಷ್ಟಿಯನ್ನು ಪ್ರಧಾನ ವೃತ್ತಿಯನ್ನಾಗಿಸಿಕೊಂಡ ಕುಟುಂಬಗಳ ಕುರಿತು ಅಭ್ಯಾಸ ಮಾಡುವುದು. ಇವರಲ್ಲಿ ಕಲಘಟಗಿ ತೊಟ್ಟಿಲು ಚಿತ್ರಕಾರರು, ಪ್ರಮುಖರಾಗಿದ್ದಾರೆ.

ಕಲಘಟಗಿಯ ತೊಟ್ಟಿಲು ಕಲೆಗಾರಿಕೆ : ಧಾರವಾಡ ಕಲಘಟಗಿಯ ಕೀರ್ತಿ, ಕಲಾತ್ಮಕವಾದ ತೊಟ್ಟಿಲುಗಳಿಂದ ಕಡಲಾಚೆಗೂ ಹರಡಿದೆ. ಮರದಿಂದ ಸುಂದರವಾಗಿ ಕೆತ್ತಿ ತಯಾರಿಸಿ ಅರಗಿನ ಬಣ್ಣಗಳಿಂದ ಅಲಂಕರಿಸಿದ ಇಲ್ಲಿನ ಮರದ ತೊಟ್ಟಿಲುಗಳು, ತೂಗುಮಂಚಗಳು, ವಿಗ್ರಹಗಳು, ಗಂಗೆ-ಗೌರಿ ಮಂಟಪಗಳು, ಲತ್ತಿಗುಣಿ, ಬಾರಕೋಲುಗುಣಿ, ಕುಡಗೋಲು ಮುಂತಾದವುಗಳು ದೇಶದಾದ್ಯಂತ ಕಲಾವಸ್ತುಗಳ ಮಳಿಗೆಗಳಲ್ಲಿ ಮಾರಲ್ಪಡುತ್ತಿವೆ.

ಕಲಘಟಗಿಯ ಸಾಹುಕಾರ ಮನೆತನದ ಜನರು ಕಲಾವಿದರ ಅಪೂರ್ವ ಕುಸುರಿ ಕೆತ್ತನೆ ಹಾಗೂ ವಿಶಿಷ್ಟವಾಗಿ ಅಲಂಕರಿಸುವ ಈ ಬಗೆಯ ಚಿತ್ರಕಲೆಗಾರಿಕೆ ನಾಡಿನ ಬೇರಾವ ಕಡೆಯೂ ರೂಪುಗೊಳ್ಳುತ್ತಿಲ್ಲ. ಹೀಗಾಗಿಯೇ ಕಲಘಟಗಿಯ ತೊಟ್ಟಿಲುಗಳಿಗೆ ಒಂದು ವಿಶಿಷ್ಟ ಸ್ಥಾನ ಲಭಿಸಿದೆ. ಇವರು ದೇವಿಕೊಪ್ಪ, ಮುಂಡಗೋಡ, ಕಿರವತ್ತಿ, ಕಲಕೇರಿ ಮುಂತಾದ ಕಡೆಗೆ ಇರುವ ಸರಕಾರಿ ಡಿಪೋದಿಂದ ಸಾಗವನಿ ಕಟ್ಟಿಗೆಯನ್ನು ಖರೀದಿಸುತ್ತಾರೆ. ಮತ್ತು ತಮಗೆ ಬೇಕಾದ ವಿನ್ಯಾಸಕ್ಕಾಗಿ ಕಟ್ಟಿಗೆಯನ್ನು ಸಿದ್ಧಗೊಳಿಸಿಕೊಳ್ಳುವ ಕ್ರಮ ಒಂದಾದರೆ ಅದಕ್ಕೆ ಶೇಡಿಮಣ್ಣನ್ನು ಕುಟ್ಟಿ ಪುಡಿಮಾಡಿ ಸೋಸಿ, ಉಂಡಿಕಟ್ಟುತ್ತಾರೆ. ನೆನೆಹಾಕಿದ ಹುಣಸೆಯ ಬೀಜವನ್ನು ರುಬ್ಬಿ, ಕುದಿಸಿ, ಇಕ್ಕೆ ಸೇಡಿಮಣ್ಣಿನೊಂದಿಗೆ ಕೂಡಿಸಿದ ಮಿಶ್ರಣವನ್ನು ತೊಟ್ಟಿಲಕಟ್ಟಿಗೆಗೆ ಹಚ್ಚಿ ಬಿಸಿಲಲ್ಲಿ ಒಣಗಿಸುತ್ತಾರೆ. ನಂತರ ಅರಗಿನ ರಾಳದ ಬಣ್ಣ ಲೇಪಿಸುತ್ತಾರೆ. ಅರಗು ರಾಳಕ್ಕೆ ವಿವಿಧ ರೀತಿಯ ವನಸ್ಪತಿಗಳನ್ನು ಸೇರಿಸಿ ಬಣ್ಣಗಳನ್ನು ತಯಾರಿಸುತ್ತಾರೆ. ತೊಟ್ಟಿಲಿನ ದುಂಡು ಕಟ್ಟಿಗೆಗಳಿಗೆ ಈ ಅರಗಿನ ಬಣ್ಣಗಳಿಂದ ಬಣ್ಣ ಕೊಡುತ್ತಾರೆ. ಗಂಡಸರು ಚಿತ್ರಗಳನ್ನು ಬಿಡಿಸಿದರೆ ಹೆಂಗಸರು ಆ ಚಿತ್ರಗಳಲ್ಲಿ ಬಣ್ಣ ತುಂಬುತ್ತಾರೆ. ಕುಸುರಿ ಕೆಲಸವನ್ನು ಗಂಡಸರು ಮಾತ್ರ ಮಾಡುತ್ತಾರೆ. ಹೀಗೆ ಕುಟುಂಬವೇ ಈ ಕೆಲಸದಲ್ಲಿ ತೊಡಗಿಸಿಕೊಳ್ಳುತ್ತದೆ.

ತೊಟ್ಟಿಲುಗಳಿಗೆ ಮೊಳೆ ಹೊಡೆಯದೇ ಹಾಗೆಯೇ ಜೋಡಿಸುವುದು ಇಲ್ಲಿಯ ವೈಶಿಷ್ಟ್ಯ, ತೊಟ್ಟಿಲಿನ ಮೇಲೆ ರಾಮಾಯಣ, ಮಹಾಭಾರತದ ದೃಶ್ಯಾವಳಿ, ಗ್ರಾಮದೇವತೆಗಳು,

ಲಕ್ಷ್ಮೀ ಸರಸ್ವತಿ, ನಂದಿ, ಮಕ್ಕಾಮಸೀದಿ, ಏಸುಕ್ರಿಸ್ತ-ಹೀಗೆ ವಿವಿಧ ಧರ್ಮದವರು ಹೇಳುವ ಚಿತ್ರಗಳನ್ನು ತೊಟ್ಟಿಲಲ್ಲಿ ಚಿತ್ರಿಸುತ್ತಾರೆ. ಅಲ್ಲದೆ ಸುಂದರವಾದ ಸುಳುವುಗಳು ವಿವಿಧ ವರ್ಣಗಳ ಸಮುಚ್ಚಯಗಳಿಂದ ತುಂಬಾ ಕಲಾತ್ಮಕವಾಗಿ ತೊಟ್ಟಿಲುಗಳು ಗಮನ ಸೆಳೆಯುತ್ತವೆ.

ಗೋಕಾಕದ ಆಟಿಕೆ ವಸ್ತುಗಳ ಕಲಾವಿದರು : ಬೆಳಗಾಂವ ಜಿಲ್ಲೆಯ ಗೋಕಾಕ್ ಅಂಟಿನ ಕರದಂಟಿಗೆ ಪ್ರಸಿದ್ಧವಾದಂತೆ ಅಲ್ಲಿಯ ಕಟ್ಟಿಗೆಯ ವರ್ಣರಂಜಿತ ತರಕಾರಿ, ಹಣ್ಣುಗಳನ್ನು ಆಟಿಗೆಯ ಗೊಂಬೆ, ವಸ್ತುಗಳನ್ನು ತಯಾರಿಸುವಲ್ಲಿಯೂ ಅಷ್ಟೇ ಕೀರ್ತಿಯನ್ನು ಪಡೆದಿದೆ. ಜಿನಗಾರ ಮನೆತನದ ಹಲವಾರು ವೃತ್ತಿಚಿತ್ರಕಾರರ ಮನೆತನಗಳು ಇಲ್ಲಿವೆ. ಇವರ ಪೂರ್ವಜರು ಕೊಲ್ಹಾಪುರ ಮಹಾರಾಜರ ಕಾಲದಲ್ಲಿ ಆಶ್ರಯವನ್ನು ಪಡೆದಿದ್ದರಂತೆ. ಅಲ್ಲಿಂದ ಗೋಕಾಕಕ್ಕೆ ವಲಸೆ ಬಂದು ನೆಲೆಸಿದುದಾಗಿ ಹೇಳುತ್ತಾರೆ.

ಆರಂಭದಲ್ಲಿ ದೇವಸ್ಥಾನದ ಮೂರ್ತಿ, ಪಲ್ಲಕ್ಕಿ, ಛತ್ರಿ ಚಾಮರಗಳಿಗೆ ಬಣ್ಣ ಮಾಡುತ್ತಿದ್ದ ಇವರು ಮುಂದೆ ಕಟ್ಟಿಗೆಯಿಂದ ಹಣ್ಣು-ಹಂಪಲ, ಕಾಯಿಪಲ್ಯ ಹಾಗೂ ಗೊಂಬೆ ತಯಾರಿಸುವುದನ್ನು ರೂಢಿಸಿಕೊಂಡರು. ವಸ್ತುಗಳಿಗೆ ತಕ್ಕಂತೆ ಬಣ್ಣಲೇಪನ ಮಾಡುವ ಇವರ ಕೈಚಳಕ ಅಚ್ಚರಿಯನ್ನುಂಟು ಮಾಡುತ್ತದೆ. ಈ ವಸ್ತುಗಳ ತಯಾರಿಕೆಗಾಗಿ ಇವರು ಹರಿವಾಳ (ಹಾಲವಾಳ) ಅಥವಾ ಪೋಲಕಿ ಕಟ್ಟಿಗೆ ಬಳಸುತ್ತಾರೆ. ಈ ಕಟ್ಟಿಗೆ ಅತ್ಯಂತ ಹಗುರವಾಗಿರುತ್ತದೆ. ಇದರ ಜೊತೆಗೆ ಬಿದಿರಿನಲ್ಲಿ ಮೈದಾಹಿಟ್ಟಿನ ಸರಿ, ಕಲ್ಲುನಾರಿನ ಹಾಳೆ, ಅಂಟು ಬಣ್ಣದ ದಾರ ಎಳೆ ಮುಂತಾದ ವಸ್ತುಗಳನ್ನು ಉಪಯೋಗಿಸುತ್ತಾರೆ.

ಗೋಕಾಕದ ಕಲಾವಿದರು ಹಾರಿವಾಳದ ಕಟ್ಟಿಗೆಯನ್ನು ಮೊದಲು ಚೆನ್ನಾಗಿ ಒಣಗಿಸಿ, ನಂತರ ಕೆತ್ತಿ ನುಣುಪುಗೊಳಿಸಿ, ಬೇಕಾದ ಆಕಾರಕ್ಕೆ ಕತ್ತರಿಸಿಕೊಳ್ಳುತ್ತಾರೆ. ನಂತರ ಸುಣಬುರಲಿ ಹರಳನ್ನು ಪುಡಿಮಾಡಿ ದ್ರಾವಣ ತಯಾರಿಸಿ, ಅದಕ್ಕೆ ಅಂಟು ಸೇರಿಸಿ ವಸ್ತುಗಳ ಮೇಲೆ ನಾಲ್ಕಾರುಬಾರಿ ಲೇಪನ ಮಾಡುತ್ತಾರೆ. ಕಟ್ಟಿಗೆಯಲ್ಲಿರುವ ಬಿರುಕು, ತಗ್ಗುಗಳನ್ನು ಲಾಟಿಯಿಂದ ತುಂಬಿಕೊಂಡು, ಆಯಾ ವಸ್ತುವಿನ ಗುಣ, ಬಣ್ಣಕ್ಕನುಗುಣವಾಗಿ ಬಣ್ಣವನ್ನು ತಿಳಿಯಾಗಿ ಲೇಪನ ಮಾಡುತ್ತ 3-4 ಬಾರಿ ಬೆಳಕು ನೆರಳಿನ ಛಾಯೆಯನ್ನು ವರ್ಣಗಳಲ್ಲಿ ಮೂಡಿಸುತ್ತಾರೆ. ಕೊನೆಯ ಹಂತದಲ್ಲಿ ಬಹಳ ಸಂಯಮದಿಂದ ಬಣ್ಣದ ವಿನ್ಯಾಸ ಪೂರ್ಣಗೊಳಿಸುತ್ತಾರೆ. ಬಣ್ಣ ಮಾಸದಿರಲು ವಾರ್ನಿಸನ್ನು ಸವರಲಾಗುತ್ತದೆ.

ಈ ಕಲಾ ಸೃಷ್ಟಿಗಳು ಮದುವೆ, ಹುಟ್ಟುಹಬ್ಬ ಇತ್ಯಾದಿ ಸಂದರ್ಭಗಳಲ್ಲಿ ವಿಶೇಷವಾಗಿ ಉಡುಗೊರೆಯ ವಸ್ತುಗಳಾಗಿ ಮಾರಾಟವಾಗುತ್ತವೆ. ಮನೆಯ ಅಲಂಕರಣ ವಸ್ತುಗಳಲ್ಲಿ ಸಾಮಾನ್ಯವಾಗಿ ಉತ್ತರ ಕರ್ನಾಟಕದಲ್ಲಿ ಗೋಕಾಕದ ಈ ಕಲಾತ್ಮಕ ವಸ್ತುಗಳು ಇರುವುದು ಸರ್ವಸಾಮಾನ್ಯ ಸಂಗತಿಯಾಗಿದೆ.

ಕಿನ್ನಾಳದ ಕಲೆಗಾರರು: ರಾಯಚೂರು ಜಿಲ್ಲೆಯ ಕೊಪ್ಪಳ ತಾಲೂಕಿನ ಕಿನ್ನಾಳ ಗ್ರಾಮ ಈಗ ಸುಮಾರು 25 ಜನ ಕುಶಲಕರ್ಮಿಗಳ ಪ್ರಯತ್ನದಿಂದ ದೇಶದ ಜನರನ್ನು

ಆಕರ್ಷಿಸಿದೆ. ಇಲ್ಲಿ ವಿಜಯನಗರ ಅರಸರ ಕಾಲದಿಂದಲೂ ಕಲಾವಿದರು ತಮ್ಮ ಸೃಜನಶೀಲ ಪ್ರತಿಭೆಯನ್ನು ಪ್ರಕಟಗೊಳಿಸುತ್ತ ಬಂದಿದ್ದಾರೆ.

ದೇವರ ಪಲ್ಲಕ್ಕಿ, ಮಂಟಪ, ಬೊಂಬೆಗಳ ಕೆತ್ತನೆಗೆಲಸ, ಪೀಠೋಪಕರಣಗಳು, ಷೋಕೇಸ್, ಒಡವೆ ಪೆಟ್ಟಿಗೆ, ಮತ್ತು ಕಿನ್ನಾಳದ 'ಟಾಯ್ಸ್' ತುಂಬ ಪ್ರಸಿದ್ಧವಾಗಿವೆ. ಮೊದಲು ಗ್ರಾಮದೇವತೆಗಳಿಗೆ ಬಣ್ಣದ ಲೇಪನ ಮಾಡುತ್ತಿದ್ದ ಈ ಕಲಾವಿದರು ಕಾಲಕ್ಕೆ ತಕ್ಕಂತೆ ತಮ್ಮ ಕಲಾಕೃತಿಗಳಲ್ಲಿ ವೈವಿಧ್ಯತೆಯನ್ನು ತಂದುಕೊಂಡಿದ್ದಾರೆ.

ಕಟ್ಟಿಗೆಯ ತುಂಡು, ಚಹಾಪೆಟ್ಟಿಗೆ, ತಟ್ಟಿನ ಗುಂಜು, ಮಣ್ಣು, ಕಟ್ಟಿಗೆಯ ಪಾಟಿ, ಹುಣಸೆಯ ಸರಿ ಮುಂತಾದ ವಸ್ತುಗಳನ್ನು ಬಳಸಿ ಕಲಾಕೃತಿಗಳನ್ನು ನಿರ್ಮಿಸುತ್ತಾರೆ. ಈ ಕಲಾಕೃತಿಗಳಿಗೆ ಬಳಸುವ ಬಣ್ಣಗಳು ಎರಡು ರೀತಿಯಲ್ಲಿವೆ. ಒಂದು ಬಾಳಪ್ಪನಬಣ್ಣ ಇನ್ನೊಂದು ಲಜಾವರಬಣ್ಣ.

ಬಾಳಪ್ಪನ ಬಣ್ಣ : ಇದು ಬಳಪದ ಬಣ್ಣವಾಗಿದ್ದು ಜನಪದರ ಬಾಯಲ್ಲಿ ಬಾಳಪ್ಪನ ಬಣ್ಣವಾಗಿದೆ. ಬಳಪದ ಕಲ್ಲನ್ನು ತಂದು ನೀರಿನಲ್ಲಿ ನೆನೆಯಿಟ್ಟು ಅರೆದು ಇಲ್ಲವೆ ತೇಯ್ದು ಅಂಟು ಹಾಕಿ ತೋಯಿಸುತ್ತಾರೆ. ಹೀಗೆ ಸೋಸಿದ ದ್ರಾವಣವನ್ನು ಆಟಿಕೆ ವಸ್ತುಗಳಿಗೆ ಲೇಪಿಸುತ್ತಾರೆ.

ಲಜಾವರ ಬಣ್ಣ: ಇದನ್ನು ಬಣ್ಣಗಳ ರಾಜನೆಂದು ಕರೆಯುತ್ತಾರೆ. ಕಿನ್ನಾಳ ಕಲಾವಿದರು ಈ ಬಣ್ಣಕ್ಕೆ ವಿಶೇಷ ಮಹತ್ವವನ್ನು ಕೊಟ್ಟಿದ್ದಾರೆ. ಕುಟ್ಟಿದ ತವರಕ್ಕೆ ಮೀನಸರಿ ಹಾಕಿ ಹದಬರುವಂತೆ ಮಾಡುತ್ತಾರೆ. ಆಮೇಲೆ ನೀರಿನಲ್ಲಿ ಕೆಲವು ಸಮಯ ನೆನೆಯಿಟ್ಟು ನಂತರ ಈ ದ್ರಾವಣವನ್ನು ಸೇರಿಸುತ್ತಾರೆ. ಹೀಗೆ ಸಿದ್ಧವಾದುದೇ ಲಜಾವರ ಬಣ್ಣ. ಕಿನ್ನಾಳದ ಕಲಾವಿದರು ಗೊಂಬೆಗಳನ್ನು ಮಣ್ಣಿನಲ್ಲಿ ಮತ್ತು ಕಟ್ಟಿಗೆ ಹಾಗೂ ಮಣ್ಣುಗಳೆರಡನ್ನು ಬಳಸಿ ಗೊಂಬೆಗಳನ್ನು ತಯಾರಿಸುತ್ತಾರೆ. ಕಿನ್ನಾಳದ ಈ ಜನಪದ ಚಿತ್ರಕಾರರು ಹಿಂದೆ ದೇವಾಲಯಗಳಲ್ಲಿ ಭಿತ್ತಿ ಚಿತ್ರಗಳನ್ನು ನಿರ್ಮಿಸುತ್ತಿದ್ದುದಾಗಿ ತಿಳಿದುಬರುತ್ತದೆ. ತೊಟ್ಟಿಲು, ಆನೆ, ಕುದುರೆಯಂತಹ ಮಕ್ಕಳ ಆಟಿಕೆಯ ವಸ್ತುಗಳನ್ನು (ಟಾಯ್ಸ್‌ಗಳನ್ನು) ಮಾಡುವಲ್ಲಿ ಇವರು ಪ್ರಖ್ಯಾತಿಯನ್ನು ಪಡೆದಿದ್ದಾರೆ. ಹಾಗೆಯೇ ಉತ್ತರ ಕರ್ನಾಟಕದಲ್ಲಿ ತಾಳಿಕೋಟೆಯ ಜಿನಗಾರರು. ಮುತ್ತಿಗೆಯ ದೊಡ್ಡಾಟದ ಕಲಾವಿನ್ಯಾಸಕಾರರು, ತೋನಶ್ಯಾಳದ ದೇವರ ಮೂರ್ತಿಗಳಿಗೆ ಬಣ್ಣ ಮಾಡುವವರು ಪ್ರಖ್ಯಾತರಾಗಿದ್ದಾರೆ.

ಒಂದೊಂದು ಜನಪದ ಚಿತ್ರಕಲೆಗಳನ್ನು ಗಮನಿಸಿದಾಗ ಕೆಲವು ಆಯಾ ಪ್ರದೇಶಕ್ಕೆ ಸೀಮಿತ ಹಾಗೂ ವಿಶಿಷ್ಟವೆನಿಸುವಂತೆ ಕಂಡುಬಂದರೂ ಮತ್ತೆ ಕೆಲವು ಕಲೆಗಳು ಸಾಮಾನ್ಯವಾಗಿ ಇನ್ನುಳಿದ ಕಡೆಗಳಲ್ಲಿ ಕಂಡುಬರುತ್ತವೆ. ಅವು ಆಯಾ ಪ್ರದೇಶದ ಜನಾಂಗೀಯ, ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ ಹಿನ್ನೆಲೆಯನ್ನು ಹಾಗೂ ಭೌಗೋಳಿಕ ಪರಿಸರವನ್ನು ಅವಲಂಬಿಸಿ ರೂಪುತಳೆದಿವೆ. ಜನಪದ ಈ ಚಿತ್ರಕಲೆಯನ್ನು ಸೂಕ್ಷ್ಮವಾದ ಪರಿವೀಕ್ಷಣೆ ವರ್ಗೀಕರಣ ಹಾಗೂ ಅಧ್ಯಯನಗಳ ಮೂಲಕ ಜನಪದರ ಸಾಂಸ್ಕೃತಿಕ ಹಿನ್ನೆಲೆಯನ್ನು ತಿಳಿದುಕೊಳ್ಳಬಹುದಾಗಿದೆ.

ಇಂದು ಕಲೆ ಹಾಗೂ ಜನಸಾಮಾನ್ಯರ ನಡುವೆ ಭಾರೀ ಅಂತರವಿದೆ. ಇಂದಿನ ಸಮಕಾಲೀನ ಕಲೆಯು ಜನಸಾಮಾನ್ಯರಿಗೆ ಅರ್ಥವಾಗದಿರುವುದೇ ಇದಕ್ಕೆ ಕಾರಣ ಎಂದು ಹಲವರ ಅಭಿಪ್ರಾಯ. ದೃಶ್ಯ ಕಲೆಗಳನ್ನು ಆಸ್ವಾದಿಸುವ ದೃಷ್ಟಿಯಿಂದ ನಮ್ಮ ಸಾಮಾನ್ಯ ಶಿಕ್ಷಣದಲ್ಲೂ ಗಂಭೀರ ಪ್ರಯತ್ನಗಳು ನಡೆಯುತ್ತಿಲ್ಲ. ಅಂತೆಯೇ ಈ ಕೊರತೆಗಳನ್ನು ಸ್ವಲ್ಪವಾದರೂ ತುಂಬುವುದು ಈ ಜನಪ್ರಿಯ ಕಲಾಮಾಲಿಕೆಯ ಆಶಯ. ಹೀಗೆ ಸಾಮಾನ್ಯರಿಗೆ ದೃಶ್ಯಕಲೆಗಳ ಪ್ರಾಥಮಿಕ ಜ್ಞಾನ ಒದಗಿಸುವ ದೃಷ್ಟಿಯಿಂದಲೇ ಇದನ್ನು ರೂಪಿಸಲಾಗಿದೆ. ಇದರಲ್ಲಿ ದೃಶ್ಯಕಲೆಯ ತಾತ್ವಿಕ ಅಂಶಗಳು, ಮಾಧ್ಯಮಗಳು, ತಂತ್ರಗಳು, ಇತಿಹಾಸ, ಆಧುನಿಕ ಕಲಾ ಪಂಥಗಳು ಇತ್ಯಾದಿ ಹಲವು ವಿಷಯಗಳನ್ನು ಕುರಿತಂತಹ ಹೊತ್ತಿಗೆಗಳನ್ನು ತರುತ್ತಿದ್ದೇವೆ. ತನ್ಮೂಲಕ ದೃಶ್ಯಕಲೆಯನ್ನು ಆಸ್ವಾದಿಸುವ ದಿಸೆಯಲ್ಲಿ ಹೆಚ್ಚಿನ ಜನರು ತೊಡಗುತ್ತಾರೆಂಬ ಮಹತ್ವಾಕಾಂಕ್ಷೆ ಈ ಮಾಲಿಕೆಯದು. ಹೀಗೆ ಜನರನ್ನು 'ಸಹೃದಯ' ರನ್ನಾಗಿಸುವ ದಿಸೆಯಲ್ಲಿ ಇದೊಂದು ಪುಟ್ಟ ಪ್ರಯತ್ನ.

ಚಿ. ಸು. ಕೃಷ್ಣ ಸೆಟ್ಟಿ
ಸಂಪಾದಕರು